Vol - 8 October 2009 Issue No. 9 Rs. 5.00/-



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine






**Sri Rameshwar Thakur,** His Excellancy The Governor of Madhya Pradesh & President, The Bharat Scouts & Guides, India receiving Citation of Distinguished Services Award presented by World Organization of Scout Movement / Asia-Pacific Region from **Smt. Pratibha Devi Singh Patil,** Her Excellancy The President of India at Ashoka Hall, Rashtrapati Bhavan, New Delhi on 23rd September 2009.

**mt. Pratibha Devi Singh Patil,** er Excellancy The President of dia presenting the Rashtrapti cout and Guide Certificates to cout K.Manoop & Guide oshne Karat representing arnataka State at Rashtrapati navan, New Delhi on rd September 2009.



**We Appeal to everyone to come forward and Contribute Generously to the Karnataka Flood Relief Fund.**



ಬಳ್ಳಾರಿಜಿಲ್ಲೆಯ ಸಿರಿಗುಪ್ಪದ ನೆರೆಸಂತ್ರಸ್ಥರಿಗೆ ಅನುಕೂಲವಾಗುವಂತೆ, ಮನೆಗಳನ್ನು ನಿರ್ಮಾಣಮಾಡಲು ಒಂದು ಲಕ್ಷರೂ ದೇಣಿಗೆ ನೀಡುವ ಪತ್ರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಆರ್.ವೆಂಕಣ್ಣನವರು, ಜಿಲ್ಲಾ ಸಂಸ್ಥೆಯ ಪರವಾಗಿ ಬಳ್ಳಾರಿ ಜಿಲ್ಲಾಧಿಕಾರಿಗಳಾದ ಶ್ರೀ ಬಿ. ಶಿವಪ್ಪನವರಿಗೆ ನೀಡುತ್ತಿರುವುದು. ಶ್ರೀ ಎಂ.ಟಿ. ಮಲ್ಲೇಶ್, ಎ.ಡಿ.ಸಿ (ಎಸ್) ಹಾಗೂ ಇತರರನ್ನು ಕಾಣಬಹುದು.



ದಾವಣಗೆರೆ ಜಿಲ್ಲಾನೆರೆಸಂತ್ರಸ್ಥರ ನಿಧಿಗೆ ರೂ 31,000/- ಚೆಕ್ಕನ್ನು ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಥಣಿ ಕೊಟ್ರೇಶ್‌ರವರು ಮುಖ್ಯ ಮಂತ್ರಿ ಪರಿಹಾರ ನಿಧಿಗೆ ಜಿಲ್ಲಾಧಿಕಾರಿಗಳಾದ ಶ್ರೀ ಅಮರನಾರಾಯಣ ಅವರಿಗೆ ನೀಡಿದರು ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಬೆಳಗಾಂ ಜಿಲ್ಲಾ ಸಂಸ್ಥೆಯವರು ನಾಗನೂರಲ್ಲಿ ನೆರೆಸಂತ್ರಸ್ತರಿಗೆ ಆಹಾರ ಸಾಮಗ್ರಿಗಳನ್ನು ನೀಡುತ್ತಿರುವುದು. ಚಿತ್ರದಲ್ಲಿ ಕಾರ್ಯಕಾರಿ ಸಂಸ್ಥೆಯ ಸದಸ್ಯರಾದ ಶ್ರೀ ದೇವರೆಡ್ಡಿ, ರೋವರ್ ನಾಯಕರಾದ ಶ್ರೀ ಎ.ಎ. ಸತಪುತೆ, ಗುದಗಪುರ ಹಾಗು ಇತರರನ್ನು ಕಾಣಬಹುದು.




ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು ಬಿಜಗಲ್ ಹಾಗೂ ತಟಕಿಟಕಿ ಗ್ರಾಮದಲ್ಲಿ 250 ಸಂತ್ರಸ್ತರಿಗೆ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯವರು ರೂ 45,000ಗಳ ಸಾಮಗ್ರಿಗಳನ್ನು 23 ಅಕ್ಟೋಬರ್ 2009ರಂದು ನೀಡಿದರು. ಚಿತ್ರದಲ್ಲಿ ಶ್ರೀಯುತರಾದ ಎಂ.ಕೆ.ಖಾನ್, ಜಿಲ್ಲಾ ಮುಖ್ಯ ಆಯುಕ್ತರು, ಪಿ.ಪಳನಿ, ಜಿಲ್ಲಾ ಸ್ಕೌಟ್ ಆಯುಕ್ತರು, ಎಂ. ಎಸ್. ಸತೀಶ್ ಜಿಲ್ಲಾ ಕಾರ್ಯದರ್ಶಿ ಹಾಗು ಕೊಪ್ಪಳ ಜಿಲ್ಲಾ ಸ್ಕೌಟ್ ಆಯುಕ್ತರಾದ ಹೆಚ್. ಎಂ. ಸಿದ್ಧಾರಾಮಸ್ವಾಮಿ ಇವರುಗಳನ್ನು ಕಾಣಬಹುದು.



ಗುಲ್ಬರ್ಗ ಜಿಲ್ಲಾ ದೇವಲಪುರದಲ್ಲಿ ಸಂಸ್ಥೆಯ ಜಿಲ್ಲಾ ಸಿಬ್ಬಂದಿವರ್ಗದವರು ನೆರೆಸಂತ್ರಸ್ತರಿಗೆ ಪರಿಹಾರ ಕೇಂದ್ರದಲ್ಲಿ ಆಹಾರವನ್ನು ತಯಾರಿಸುತ್ತಿರುವುದು. ಚಿತ್ರದಲ್ಲಿ ಶ್ರೀ ಎಸ್. ಸುಳ್ಳದ್, ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ವೀರಭದ್ರಪ್ಪ, ಡಿ.ಓ.ಸಿ ಮತ್ತು ಇತರರನ್ನು ಕಾಣಬಹುದು.



ಗಾಡಗೋಳಿಯಲ್ಲಿ ಗದಗ್ ಜಿಲ್ಲಾ ಸಂಸ್ಥೆಯವರು ನೆರೆಸಂತ್ರಸ್ತರಿಗೆ ಆಹಾರ ಮತ್ತು ಬಟ್ಟೆಗಳನ್ನು ಹಂಚುತ್ತಿರುವುದು. ಶ್ರೀ ಡಿ.ವಿ. ಬೆಲ್ಲದ್, ಜಿಲ್ಲಾ ಆಯುಕ್ತರು ಸ್ಕೌಟ್ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.

# Editor's desk



**"YOU ARE HAPPY – When you are satisfied with what you have" -**

Is it not true in the era of materialistic world like what we are passing through? This is what our founder BP explained in "Rovering to Success" while narrating the 2 keys to happiness.

The happiness doesn't come to us easily, but however it is in every movement of our lives. i.e., if we feel what we have to do is simply look at every thing what we hve in a constructive way. We should be optimistic and think positive.

Children become happy when they get what they want like toys or toffees. They live in a world of fantasies and everytime they get a new toy or somethingto play, they get accustomed with and become familiar. We call it learning experience and we adopt the same basics in Cub/Bulbul sections. This is how B.P. promoted Cubbing with jungle Book (Mowgli)concept.

In adolescents it becomes attractions, which give happiness. The young people want independency and they do every thing in their own ways. But they also look out for some sort of support from their inspirational persons. They can believe their parents or teachers or some one with whom they can confide. With this impression every educational institution looks out for good councellor to support students in achieving their dreams. From past 100 years we are following the same approach in Scout Troops/ Guide companies. B.P. in "Aids to Scout Mastership" says, every adult should set an example for his young followers.

As the young adults grow, the instinct to realize their dreams become more vigorous and they get happiness in it. It is at this stage they start differentiating the reality and fantasies. They want some strong force to support their decisions. It is this crucial movement the young minds set to become greater contributors to humanity and society where they live. In today's world reality shows have become more popular. The reason is very young adult wants to create image of his own. We provide these strategies in Rovering/Rangering and help every young adult in their venture in to life. The Rovering to Success give clear guidelines to young adults for their success and happiness.

To conclude, we as adults in the greatest movement of Scout/Guide, should adopt different roles to deal with different age groups. We should be facilitators. councellors, friends, guides, inspirational leaders and above all the real Scout/ Guide Adults. This will give us happiness and satisfaction, since we are here to serve the young people and enjoy the Scouting / Guiding......

M.A. KHALID
State Secretary

# ಮುಖ್ಯ ಆಯುಕ್ತರ ನುಡಿ..........

ಮಾನ್ಯರೆ,

ಕರ್ನಾಟಕ ರಾಜ್ಯ ಹಿಂದೆಂದೂ ಕಂಡರಿಯದ ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಲಕ್ಷಾಂತರ ಮಂದಿ ನಿರ್ವಸಿತರಾಗಿದ್ದಾರೆ. ನೂರಾರು ಜನ ಪ್ರಾಣ ಕಳೆದುಕೊಂಡಿದ್ದಾರೆ. ಲಕ್ಷಾಂತರ ಎಕರೆಯಲ್ಲಿ ಬೆಳದು ನಿಂತ ಫಸಲು ಸಂಪೂರ್ಣವಾಗಿ ನಾಶವಾಗಿದೆ. ನೂರಾರು ಹಳ್ಳಿಗಳು ಜಲಪ್ರಳಯದಲ್ಲಿ ಮುಳುಗಿವೆ. ಸನ್ಮಾನ್ಯ ಮುಖ್ಯಮಂತ್ರಿಗಳ ನೇತೃತ್ವದಲ್ಲಿ ರಾಜ್ಯ ಸರ್ಕಾರ ಯುದ್ಧದೋಪಾದಿಯಲ್ಲಿ ಪರಿಹಾರ ಕಾಮಗಾರಿಗಳನ್ನು ಕೈಗೆತ್ತಿಕೊಂಡಿರುವುದು ದಿನನಿತ್ಯ ಪತ್ರಿಕೆ ಹಾಗೂ ದೂರದರ್ಶನಗಳ ಮುಖೇನ ಎಲ್ಲರ ಗಮನಕ್ಕೆ ಬಂದಿದೆ.

ನಾನು ದಿನಾಂಕ 30 ಸೆಪ್ಟೆಂಬರ್‌ನಿಂದಲೇ ನೆರೆ ಪೀಡಿತ ಜಿಲ್ಲೆಗಳ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಕಾರ್ಯಕರ್ತರೊಂದಿಗೆ ನೇರ ಸಂಪರ್ಕ ಹೊಂದಿದ್ದು, ಸೂಕ್ತ ಸಲಹೆ-ಸೂಚನೆ ನೀಡಿದ್ದಲ್ಲದೆ-ತಕ್ಷಣವೇ ರಾಜ್ಯ ಸರ್ಕಾರದ ನೋಡಲ್ ಅಧಿಕಾರಿಗಳ ಸತತ ಸಂಪರ್ಕದೊಂದಿಗೆ- ಸ್ಕೌಟ್-ಗೈಡ್ ಸಂಸ್ಥೆಯ ಕಾರ್ಯಕರ್ತರುಗಳು ಸೇವೆ ಸಲ್ಲಿಸಲು ಸಿದ್ಧರಿರಲು ಸೂಚಿಸಿದ್ದೇನೆ. ಈಗಾಗಲೇ ಈ ದಿಸೆಯಲ್ಲಿ ತೆಗೆದುಕೊಂಡ ಕ್ರಮಗಳ ಬಗ್ಗೆ ರಾಜ್ಯ ಸಂಸ್ಥೆಯ ಗಮನಕ್ಕೆ ಸಾಕಷ್ಟು ವಿವರಗಳು ಜಿಲ್ಲೆಗಳಿಂದ ಬಂದಿದೆ.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸ್ಕೌಟ್-ಗೈಡ್ ಚಳವಳಿಯ ನೂರಾರು ಸ್ವಯಂ ಸೇವಕರುಗಳು ರಾಜ್ಯದಲ್ಲಿ ಅತಿವೃಷ್ಟಿ ಮತ್ತು ಪ್ರವಾಹದಿಂದ ಸಂತ್ರಸ್ಥರಾಗಿರುವ ಜಿಲ್ಲೆಗಳ ಗಂಜಿಕೇಂದ್ರಗಳಲ್ಲಿ ಹಾಗೂ ಪುನರ್ವಸತಿ ಕೇಂದ್ರಗಳಲ್ಲಿ ಸೇವಾ ಕಾರ್ಯದಲ್ಲಿ ನಿರತರಾಗಿರುವ ಬಗ್ಗೆ ರಾಜ್ಯ ಸಂಸ್ಥೆಗೆ ಎಲ್ಲೆಡೆಯಿಂದಲೂ ದೂರವಾಣಿ ಮತ್ತು ಪತ್ರಗಳ ಮುಖೇನ ವಿವರಗಳು ಬರುತ್ತಿವೆ. ಹಲವಾರು ಜಿಲ್ಲೆಗಳಲ್ಲಿ ಸಂತ್ರಸ್ಥರ ಶಿಬಿರಗಳಲ್ಲಿ ಸಾರ್ವಜನಿಕರು ಮತ್ತು ಸಂಘ ಸಂಸ್ಥೆಗಳೊಡಗೂಡಿ ಸಂಗ್ರಹಿಸಿದ ಆಹಾರ ಪದಾರ್ಥ, ಬಟ್ಟೆ ಹಾಗೂ ನಿತ್ಯೋಪಯೋಗಿ ವಸ್ತುಗಳನ್ನು ರೋವರ್ಸ್- ರೇಂಜರ್ಸ್- ಸ್ಕೌಟ್ಸ್-ಗೈಡ್ಸ್ ಮತ್ತು ಪದಾಧಿಕಾರಿಗಳು ನೀಡಿದ ಬಗ್ಗೆಯೂ ವಿವರಗಳು ಬಂದಿರುತ್ತದೆ.

ರಾಯಚೂರು, ಗುಲ್ಬರ್ಗಾ, ಕೊಪ್ಪಳ, ಬಳ್ಳಾರಿ, ಗದಗ, ಹಾವೇರಿ, ಬೆಳಗಾಂ, ದಾರವಾಡ ದಾವಣಗೆರೆ, ಉತ್ತರ ಕನ್ನಡ, ಬಾಗಲಕೋಟೆ, ಬಿಜಾಪುರ ಜಿಲ್ಲೆಗಳಲ್ಲಿ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಹಾಗೂ ಸಂಘ-ಸಂಸ್ಥೆಗಳ ಸ್ವಯಂಸೇವಕರು ಸ್ಥಳೀಯ ಮತ್ತು ಜಿಲ್ಲಾಡಳಿತದ ನೆರವಿನೊಂದಿಗೆ ಪರಿಹಾರ ಕಾಮಗಾರಿಯಲ್ಲಿ ಸಕ್ರಿಯವಾಗಿ ಭಾಗವಹಿಸಿರುವ ಬಗ್ಗೆ ವರದಿಗಳು ಬಂದಿವೆ.

ಕನಿಷ್ಠ ಮುಂದಿನ ಮೂರು-ನಾಲ್ಕು ತಿಂಗಳು ಸತತವಾಗಿ ಸರ್ಕಾರ-ಸರ್ಕಾರೇತರ ಸಂಘ ಸಂಸ್ಥೆಗಳ ಸಹಾಯ-ಸಹಕಾರ ನೆರವಿನೊಂದಿಗೆ ಸ್ಕೌಟ್-ಗೈಡ್ ಚಳವಳಿಯ ಎಲ್ಲ ಹಂತದ ಪದಾಧಿಕಾರಿಗಳು ಸಕ್ರಿಯವಾಗಿ ಪರಿಹಾರ ಕಾಮಗಾರಿಗಳಲ್ಲಿ ಭಾಗವಹಿಸಬೇಕಾಗಿ ಪ್ರಾರ್ಥಿಸುತ್ತೇನೆ.

ತುಮಕೂರಿನ ಗೈಡ್ ಆಯುಕ್ತೆಯಾದ ಶ್ರೀಮತಿ ಕೆ.ಎಸ್. ಕಮಲ ಅವರು ತುಮಕೂರು ಜಿಲ್ಲಾಧಿಕಾರಿಗೆ ನೆರೆಪರಿಹಾರ ನಿಧಿಗೆ ಒಂದು ಲಕ್ಷ ರೂ. ದೇಣಿಗೆ ನೀಡಿರುತ್ತಾರೆ. ದಾವಣಗೆರೆ ಜಿಲ್ಲಾ ಸಂಸ್ಥೆ ಹಾಗೂ ಸಾರ್ವಜನಿಕರಿಂದ ಸಂಗ್ರಹಿಸಿದ ಒಟ್ಟು ಹಣ ರೂ. 31,000/- ಸಾವಿರ ರೂಗಳನ್ನು ಜಿಲ್ಲಾಧಿಕಾರಿಗೆ ನೀಡಿರುತ್ತಾರೆ. ಬಳ್ಳಾರಿ ಜಿಲ್ಲಾ ಸಂಸ್ಥೆಯವರು ನೆರೆಯಿಂದ ನಿರಾಶ್ರಿತರಾದ ಸಿರಗುಪ್ಪಾ ತಾಲ್ಲೂಕಿನ ಕುಟುಂಬಗಳಿಗೆ ಮನೆ ನಿರ್ಮಿಸಿಕೊಡಲು ರೂ. ಒಂದು ಲಕ್ಷ ನೀಡುವುದಾಗಿ ಪತ್ರ ಮುಖೇನ ಜಿಲ್ಲಾಧಿಕಾರಿಗಳಿಗೆ ತಿಳಿಸಿದ್ದಾರೆ. ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ, ಐಸಾಕ್ ನ್ಯೂಟನ್ ಹಾಗೂ ಕೆ.ಕೆ. ಆಂಗ್ಲ ಮಾಧ್ಯಮ ವಿದ್ಯಾಸಂಸ್ಥೆಗಳೊಡಗೂಡಿ ಸುಮಾರು 45,000/- ಗಳ ಮೊತ್ತದ ಪರಿಹಾರ ಸಾಮಗ್ರಿಗಳಾದ ರಗ್‌ಗಳು, ಬೆಡ್‌ಶೀಟ್‌ಗಳು, ತಟ್ಟೆ, ಲೋಟ, ಕಪ್ಪುಗಳು, ಟವಲ್‌ಗಳನ್ನು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕ್‌ನ ಬಿಜಗಲ್ ತಟಕಿಟಕಿ ಗ್ರಾಮಗಳಿಗೆ ಜಿಲ್ಲೆಯ ಪದಾಧಿಕಾರಿಗಳು ಹೋಗಿ ಸಂತ್ರಸ್ಥರಿಗೆ ಸಾಂತ್ವನ ಹೇಳುವುದರೊಂದಿಗೆ ವಸ್ತುಗಳನ್ನು ಸ್ವತಃ ದಿನಾಂಕ 23-10-2009ರಂದು ನೀಡಿರುತ್ತಾರೆ.

ಬೆಂಗಳೂರು ದಕ್ಷಿಣ ಜಿಲ್ಲೆ ಆನೇಕಲ್‌ನ ಭಗತ್‌ಸಿಂಗ್ ರೋವರ್ ತಂಡದ ಸದಸ್ಯರು ತಾವು ಆನೇಕಲ್‌ನಲ್ಲಿ ಸಂಗ್ರಹಿಸಿದ ಪರಿಹಾರನಿಧಿಯಾದ ರೂ 10,000/- ಹತ್ತು ಸಾವಿರ ರೂಗಳನ್ನು ತಂಡದ ನಾಯಕರಾದ ಶ್ರೀ ಎ.ಎನ್. ನರೇಂದ್ರಕುಮಾರ್ ಅವರೊಂದಿಗೆ ರಾಜ್ಯ ಕಚೇರಿಗೆ ಬಂದು ಕೊಟ್ಟಿರುತ್ತಾರೆ.

ಗುಲ್ಬರ್ಗಾ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್-ರೋವರ್ಸ್-ರೇಂಜರ್ಸ್ ಹಾಗೂ ದಳ ನಾಯಕರುಗಳು ಐದು ನೆರೆಪೀಡಿತಹಳ್ಳಿಗಳಾದ ದೇವಾಪುರ, ಹುಣಶ್ಯಾಳ, ತಿಂಥಿಣಿ, ಬೆಳ್ಳುಡಗಿ ಮತ್ತು ಕಡಕೋಳಗಳಿಗೆ ಹೋಗಿ ಸಂತ್ರಸ್ಥರುಗಳಿಗೆ ಸಾಂತ್ವನ ಹೇಳಿ ತಾವು ತೆಗೆದುಕೊಂಡು ಹೋದ ಆಹಾರ ಪದಾರ್ಥಗಳು, ಬಟ್ಟೆಗಳು, ಗೃಹೋಪಯೋಗಿ ವಸ್ತುಗಳನ್ನು ವಿತರಿಸಿ ಅವರುಗಳ ಮನೋಸ್ಥೈರ್ಯ ಬಲಪಡಿಸಿದ್ದಾರೆ. ಈ ಗುರುತರ ಕರ್ತವ್ಯದಲ್ಲಿ ಸಹಕರಿಸಿದ ಸ್ಕೌಟ್-ಗೈಡ್ ಚಳವಳಿಯ ಎಲ್ಲಾ ಸಹೋದ್ಯೋಗಿಗಳಿಗೆ ನನ್ನ ಹೃತ್ಪೂರ್ವಕ ನಮನಗಳು.

ಹಲವಾರು ಜಿಲ್ಲೆಗಳ ಮೂಲಭೂತ ತರಬೇತಿ ಶಿಬಿರಗಳು ಯಶಸ್ವಿಯಾಗಿ ನಡೆದ ಬಗ್ಗೆ ವರದಿಗಳು ಬಂದಿದೆ. ಈ ತಿಂಗಳು ಮತ್ತು ನವೆಂಬರ್‌ನಲ್ಲಿ ಹಲವು ಜಿಲ್ಲೆಗಳು ಡಯಟ್ ಶಿಕ್ಷಣ ಸಂಸ್ಥೆ ನೆರವಿನೊಂದಿಗೆ ಶಿಬಿರಗಳನ್ನು ಏರ್ಪಡಿಸಿದ್ದಾರೆ. ನಾನು ಹಾಸನ, ಚಿಕ್ಕಮಗಳೂರು, ಕೊಡಗು, ಮೈಸೂರು ಜಿಲ್ಲೆಗಳಿಗೆ ತಿಂಗಳ ಕೊನೆಯಲ್ಲಿ ಪ್ರವಾಸಕ್ಕೈಗೊಳ್ಳುತ್ತೇನೆ. ಸ್ಕೌಟ್-ಗೈಡ್ ವಿಭಾಗಗಳ ರಾಜ್ಯ ಸಂಘಟನಾಧಿಕಾರಿಗಳು ಧಾರವಾಡ, ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿನ ಕಾರ್ಯಕ್ರಮಗಳಿಗೆ ಹೋಗಿ ಬಂದಿದ್ದಾರೆ. ರಾಜ್ಯ ಸಂಸ್ಥೆಯು ಎಲ್ಲಾ ಜಿಲ್ಲೆಗಳಿಗೆ ಸೂಕ್ತ ಸಹಾಯ ಮಾರ್ಗದರ್ಶನಕ್ಕಾಗಿ ಸಂಸ್ಥೆಯ ಹಿರಿಯ ಅನುಭವಿ ನಾಯಕರುಗಳನ್ನು ಜಿಲ್ಲಾ ಸಂಯೋಜಕರುಗಳನ್ನಾಗಿ ನೇಮಿಸಿ ಜಿಲ್ಲೆಗಳಿಗೆ ತಿಳಿಸಲಾಗಿದೆ. ಅವರುಗಳ ಮಾರ್ಗದರ್ಶನ ಜಿಲ್ಲೆಗಳಿಗೆ ಸಹಕಾರಿಯಾಗುವುದೆಂದು ನಾನು ನಂಬಿದ್ದೇನೆ.

ಅತೀವ ಸಂಕಷ್ಟಕ್ಕೆ ಸಿಲುಕಿರುವ ಲಕ್ಷಾಂತರ ಸಂತ್ರಸ್ತರುಗಳಿಗೆ ದಯಾಮಯನಾದ ಭಗವಂತನ ಕೃಪೆಯಿಂದ ಅವರ ದುಃಖ-ದುಮ್ಮಾನಗಳು ಶೀಘ್ರ ಪರಿಹಾರವಾಗಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

**ಸಾರ್ವಜನಿಕರ / ಸಂಘ ಸಂಸ್ಥೆಗಳ ಸಹೃದಯರಲ್ಲಿ ಸವಿನಯ ವಿನಂತಿ,**

ಸಾರ್ವಜನಿಕ ಸಹೃದಯರಿಂದ, ಶಾಲಾ ಕಾಲೇಜು ಉಪಾಧ್ಯಾಯರಿಂದ, ಉಪನ್ಯಾಸಕರಿಂದ, ಸಂಘ ಸಂಸ್ಥೆಗಳಿಂದ, ನಾನಾ ಇಲಾಖೆಗಳ ಸಿಬ್ಬಂದಿ, ಅಧಿಕಾರಿ ವರ್ಗದವರಿಂದ, ಸ್ಕೌಟ್-ಗೈಡ್ ವಿದ್ಯಾರ್ಥಿಗಳ ಬೋಧಕರಿಂದ ಹಾಗೂ ಇತರೇ ಎಲ್ಲಾ ಸಂಘ-ಸಂಸ್ಥೆಗಳ ಸಹೃದಯರಿಂದ, ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆಗೆ ಚಂದಾದಾರರಾಗಲು ವಿನಂತಿಸಿಕೊಳ್ಳಲಾಗಿದೆ.

ಚಂದಾ ವಿವರ: ಒಬ್ಬರಿಗೆ : ಒಂದು ವರ್ಷಕ್ಕೆ ರೂ. 50-00

ಶಿಕ್ಷಣ ಇಲಾಖೆ/ಎಲ್ಲಾ ಇಲಾಖೆಗಳಿಗೆ, ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100-00

ಚಂದಾ ಹಣವನ್ನು ಎಂ.ಓ./ಡಿ.ಡಿ./ಚೆಕ್ ಮೂಲಕ ಈ ಕೆಳಗೆ ಕೊಟ್ಟಿರುವ ವಿಳಾಸಕ್ಕೆ ಕಳುಹಿಸಿ ಸದಸ್ಯತ್ವವನ್ನು ಪಡೆಯಬಹುದು

ವಿಳಾಸ : ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಾರ್ತಾಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ, ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ, ಬೆಂಗಳೂರು-560 002

## ನವದೆಹಲಿಯಲ್ಲಿ ದಿನಾಂಕ :23-09-2009 ರಂದು ಜರುಗಿದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿ

ದಿನಾಂಕ 23-09-2009 ರಂದು ಬೆಳಗ್ಗೆ 11 ಗಂಟೆಗೆ ರಾಷ್ಟ್ರಪತಿ ಭವನದ ಅಶೋಕ ಸಭಾಂಗಣದಲ್ಲಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಶಸ್ತಿ ಪ್ರದಾನ ಸಮಾರಂಭ ಜರುಗಿತು ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ಸಿಂಗ್ ಪಾಟೀಲ್ ರವರು ಸಮಾರಂಭದಲ್ಲಿ ಪಾಲ್ಗೊಂಡು ಎಲ್ಲಾ ರಾಜ್ಯಗಳಿಂದ ಆಯ್ಕೆಯಾಗಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಷ್ಟ್ರಪತಿ ಪ್ರಶಸ್ತಿ ಪತ್ರ ಹಾಗೂ ಪದಕಗಳನ್ನು ವಿತರಿಸಿದರು. ಪ್ರಾರಂಭದಲ್ಲಿ ರಾಷ್ಟ್ರೀಯ ಆಯುಕ್ತರಾದ ಶ್ರೀ ಎಲ್.ಎಂ. ಜೈನ್‌ರವರು ರಾಷ್ಟ್ರಪತಿಯವರನ್ನು ಸ್ವಾಗತಿಸಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನು ಹೇಳಿದರು.

ಕರ್ನಾಟಕದಲ್ಲಿ ಉತ್ತೀಣರಾದ ಎಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪರವಾಗಿ 5 ಸ್ಕೌಟ್ಸ್ ಮತ್ತು 5 ಗೈಡ್ಸ್‌ಗಳು ರ್‍ಯಾಲಿಯಲ್ಲಿ ಭಾಗವಹಿಸಿದ್ದರು. ಸ್ಕೌಟ್ಸ್‌ಗಳ ಪರವಾಗಿ ಕುಮಾರ್ ಮನೂಪ್ ಕೆ. ಹಾಗೂ ಗೈಡ್ಸ್‌ಗಳ ಪರವಾಗಿ ಕುಮಾರಿ ರೋಷನಿ ಕಾರತ್ ಇವರುಗಳು ಘನತೆವೆತ್ತ ರಾಷ್ಟ್ರಪತಿಗಳಿಂದ ಪ್ರಮಾಣ ಪತ್ರ ಹಾಗೂ ಪದಕವನ್ನು ಸ್ವೀಕರಿಸಿದರು. ಮೇಲ್ಕಂಡ ಸಮಾರಂಭದಲ್ಲಿ ಘನತೆವೆತ್ತ ರಾಷ್ಟ್ರಪತಿಯವರು ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನುದ್ದೇಶಿಸಿ ಮಾತನಾಡಿದರು. ಶ್ರೀ ಎ.ಎಂ. ಶಂಕರ್, ಜಿಲ್ಲಾ ಸಂಘಟಕರು ಕರ್ನಾಟಕ ತಂಡದ ನಾಯಕರಾಗಿ ಭಾಗವಹಿಸಿದರು.

## Asia- Pacific Regional Award for Distinguished Service

*Our Hearty Congratulations to*

**SRI RAMESHWAR THAKUR** His Excellency the Governor of Madhya Pradesh and President the Bharat Scouts and Guides, India on being conferd with distinguished Service Award by World Organisation of Scout Movement / Asia- Pacific Region. He received the Medallion and Citation from Smt. Pratibha Devi Singh Patil, Her Excellency The President of India, at Ashoka Hall, Rashtrapati Bhavan, New Delhi. on 23rd September 2009 .

Sri L.M. Jain, National Commissioner, Sri M.A. Khalid, State Secretary and Vice Chairman, APR. Scout Committee, State Chief Commissioners, Awardees, Scouts & Guides and others were present.

## 23rd Asia Pacific Regional Scout Conference

27th October to 1st November 2009 at Hilton, Kuala Lumpur, Malaysia.

Sri Narayana Setty, State Organizing Commissioners (S), Sri V.A. Satapute, Rover Scout Leader & Lecturer, Sri V.R. Devaraddi, Rover Scout Leader. & Leacturer, Sri R.A. Nimbalkar, Scout Master & Head Master and Sri Nagesh R. Shivapur, ASOC(S),of Belgaum District are attending the APR Scout Conference as Observers from Karnataka State.



# ಗಣರಾಜ್ಯ ಭಾರತದ ರಾಷ್ಟ್ರಪತಿ ಗೌರವಾನ್ವಿತ ಶ್ರೀಮತಿ ಪ್ರತಿಭಾದೇವಿ ಸಿಂಗ್ ಪಾಟೀಲ ಅವರು 2007-08 ಮತ್ತು 2008-09ರ ಸಾಲಿನ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಶಸ್ತಿ ಪ್ರದಾನ ಮಾಡಿದ ಸಂದರ್ಭದಲ್ಲಿ ನೀಡಿದ ಸಂದೇಶ

**ರಾಷ್ಟ್ರಪತಿ ಭವನ, ನವದೆಹಲಿ, 23, ಸೆಪ್ಟೆಂಬರ್- 2009**

ಮಹಿಳೆಯರೇ ಮತ್ತು ಮಹನೀಯರೇ,

2007-08 ಮತ್ತು 2008-09 ರ ಸಾಲಿನ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಶಸ್ತಿ ಪ್ರಮಾಣ ಪತ್ರಗಳನ್ನು ನೀಡಲು ನನಗೆ ಹರ್ಷವೆನಿಸಿದೆ. ಈ ಪ್ರಮಾಣ ಪತ್ರಗಳು ಶ್ರಮದ ಕೆಲಸ ಮತ್ತು ಶಿಸ್ತಿಗೆ ನೀಡುವ ಮನ್ನಣೆಯಾದ ಕಾರಣ, ನಾನು ವಿಜೇತರನ್ನೆಲ್ಲ ಅಭಿನಂದಿಸುತ್ತೇನೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ವಹಿತಕ್ಕಿಂತ ಸೇವೆಗೆ ಸ್ಥಾನ ಕೊಟ್ಟಿರುವ ಚಳವಳ. ಹಾಗಾಗಿ ಅದು ಪ್ರಶಂಸನೀಯ. ರಾಷ್ಟ್ರೀಯ ಭಾವೈಕ್ಯತೆಯ ನಿಷ್ಠೆಯನ್ನು ಬೆಳೆಸುವಲ್ಲಿ ಮತ್ತು ಯುವಜನ ಅಭಿವೃದ್ಧಿ ಚಟುವಟಿಕೆಗಳನ್ನು ಉತ್ತೇಜಿಸುವಲ್ಲಿ ಈ ಚಳವಳಿಯ ಸದಸ್ಯರ ಶ್ಲಾಘನೀಯ ಕೆಲಸಕ್ಕೂ ಅವರೆಲ್ಲರನ್ನೂ ನಾನು ಅಭಿನಂದಿಸುತ್ತೇನೆ. ಹಾಗೆಯೇ, ನಿಸ್ವಾರ್ಥತೆಯಿಂದ ಕೆಲಸ ಮಾಡಲು ಇತರರನ್ನು ಪ್ರೇರೇಪಿಸುವಂತೆ ಅವರಿಗೆ ಕರೆ ಕೊಡುತ್ತೇನೆ.

ಯುವಜನರು ರಾಷ್ಟ್ರಕ್ಕಾಗಿ ಮತ್ತು ಮಾನವ ಜನಾಂಗಕ್ಕಾಗಿ ಸೇವೆ ಕೈಗೊಳ್ಳಲು ಅವರನ್ನು ಸಜ್ಜುಗೊಳಿಸಲಿಕ್ಕಾಗಿ ಅವರ ಅಭಿವೃದ್ಧಿ ಸಮಗ್ರ ಮಾರ್ಗಕ್ರಮ ಅತ್ಯಂತ ಅಗತ್ಯವಾಗುತ್ತದೆ: ಭಾರತದ ಯುವಜನರೆ ಒಂದು ದೇಶ. ಅದರ ಜನಸಂಖ್ಯೆಯ ಶೇಕಡ 54 ಭಾಗ 25 ವರ್ಷಗಳ ಒಳಗಿನವರಾಗಿದ್ದಾರೆ. ಭಾರತದ ಭವಿಷ್ಯದಲ್ಲಿ ಯುವಜನರು ಮಹತ್ವದ ಪಾತ್ರ ವಹಿಸಬೇಕಾಗಿದೆ. ಅವರು ಒಳ್ಳೆಯ ಬದುಕನ್ನು ನಡೆಸಲು ಅಗತ್ಯವಾದ ಶಿಕ್ಷಣ ಮತ್ತು ಕೌಶಲ್ಯವನ್ನು ಅವರಿಗೆ ಒದಗಿಸುವುದು ಮುಖ್ಯವಾಗುತ್ತದೆ. ಹಾಗೆಯೇ, ಅವರ ವ್ಯಕ್ತಿತ್ವದ ಮಾನಸಿಕ, ದೈಹಿಕ ಮತ್ತು ಆತ್ಮಿಕ ಅಂಶಗಳನ್ನು ಪೋಷಿಸಿ, ಅವರಲ್ಲಿ ಒಳ್ಳೆಯ ಮೌಲ್ಯಗಳನ್ನು ಅಚ್ಚೊತ್ತುವುದೂ ಅಷ್ಟೇ ಅಗತ್ಯ. ಸಚ್ಚಾರಿತ್ರ್ಯವಿಲ್ಲದ ಬದುಕು ಗಂಧವಿಲ್ಲದ ಪುಷ್ಪದಂತೆ. ನನಗೆ ಗಾಂಧೀಜಿ ಅವರ ಮಾತುಗಳು ನೆನಪಾಗುತ್ತವೆ: "ನೀವು ನಿಮ್ಮ ಚಾರಿತ್ರ್ಯವನ್ನು ರೂಪಿಸಿಕೊಳ್ಳದಿದ್ದರೆ, ನಿಮ್ಮ ವಿದ್ವತ್ತೆಲ್ಲ ವ್ಯರ್ಥವಾಗಿಬಿಡುತ್ತದೆ" ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅಂತಹ ಸಾಮರಸ್ಯದ ವ್ಯಕ್ತಿಗಳನ್ನು ರೂಪಿಸಲು ಪ್ರಯತ್ನಿಸುತ್ತಿರುವುದು ಮತ್ತು ಈ ಉದ್ದೇಶಕ್ಕಾಗಿ ಉಪನ್ಯಾಸಗಳು, ಗೋಷ್ಠಿಗಳು, ಸ್ಪರ್ಧೆಗಳು ಮತ್ತು ವಸ್ತು ಪ್ರದರ್ಶನಗಳನ್ನು ಉತ್ತೇಜಿಸುತ್ತಿರುವುದು ಹೃದಯ ತುಂಬಿ ಬರುವ ಸಂಗತಿ.

ತಮ್ಮ ಮಕ್ಕಳು ಬದುಕಿನಲ್ಲಿ ಯಶಸ್ವಿಯಾಗಬೇಕೆಂಬುದು ಮತ್ತು ಜವಾಬ್ದಾರಿಯುತ ನಾಗರೀಕರಾಗಬೇಕೆಂಬುದು ಎಲ್ಲ ತಂದೆ-ತಾಯಿಗಳ ಅಪೇಕ್ಷೆಯಾಗಿರುತ್ತದೆ. ರಾಷ್ಟ್ರ ನಿರ್ಮಾಣದ ಕಾರ್ಯಕ್ಕಾಗಿ ಯುವಜನ ಶಕ್ತಿ-ಸಾಮರ್ಥ್ಯಗಳನ್ನು ತೊಡಗಿಸುವುದು ಅಗತ್ಯವಾಗುತ್ತದೆ. ಈ ದಿಸೆಯಲ್ಲಿ ಗ್ರಾಮೀಣ ಯುವಜನರನ್ನು ಹತ್ತಿರಕ್ಕೆ ಬರಮಾಡಿಕೊಂಡು ಅವರನ್ನು ಬಳಸಿಕೊಳ್ಳುವಂತಾಗಬೇಕು. ಇಂದು ಇರುವ ಅವಕಾಶಗಳ ವ್ಯಾಪ್ತಿ ಮತ್ತು ರೀತಿಗಳನ್ನು ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಊಹಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಆಗಿರುವ ಪ್ರಗತಿ ಜ್ಞಾನದ ಹೊಸ ಕ್ಷೇತ್ರಗಳು ಮತ್ತು ಹೊಸ ಚಟುವಟಿಕೆಗಳನ್ನು ತೆರೆದಿಟ್ಟಿದೆ. ರಾಷ್ಟ್ರದ ಕೃಷಿ, ಕೈಗಾರಿಕೆ ಮತ್ತು ಸೇವಾ ಕ್ಷೇತ್ರಗಳಲ್ಲಿ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಲಿಕ್ಕಾಗಿ, ಜನರ ಪ್ರತಿಭೆ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಗಳನ್ನು ಬಳಸಿಕೊಳ್ಳಬೇಕಾದ ಅಗತ್ಯವಿದೆ. ಯುವಜನರು ದೇಶದ ಜನರ ಕ್ಷೇಮಾಭ್ಯುದಯಕ್ಕಾಗಿ ಹೊಸ ಕೌಶಲ್ಯಗಳು ಹಾಗೂ ಜ್ಞಾನವನ್ನು ಸಂಪಾದಿಸುವತ್ತ ತಮ್ಮ ಗಮನಕೊಡಬೇಕು.

ಇಂದಿನ ಯುವಜನ ಹಾಗೂ ವಿದ್ಯಾರ್ಥಿಗಳೇ ಭಾರತದ ನಾಳಿನ ಶಿಲ್ಪಿಗಳು. ನಿಮ್ಮ ಮೇಲೆ ಭಾರಿ ಹೊಣೆಗಾರಿಕೆಯ ಭರವಸೆ ಇಟ್ಟುಕೊಳ್ಳಲಾಗಿದೆ. ಅದು ನಮ್ಮ ಶಾಲೆಯಲ್ಲಿರಲಿ, ನಮ್ಮ ಕೆಲಸದಲ್ಲಿರಲಿ, ಅಥವಾ ನಮ್ಮ ನಾಗರಿಕ ಜೀವನದಲ್ಲಿರಲಿ, ನಮ್ಮ ರಾಷ್ಟ್ರಕ್ಕೆ ಶಿಸ್ತು ಮೂಲಭೂತ ಅಗತ್ಯವೆಂದು ನಾನು ತಿಳಿದಿದ್ದೇನೆ. ನಮ್ಮ ನಿತ್ಯ ಜೀವನದಲ್ಲಿ ಶಿಸ್ತು ಇದ್ದರೆ, ನಾವು ಏನೇ ಮಾಡಿದರೂ ನಮ್ಮ ಕೆಲಸ ಹೆಚ್ಚು ಕ್ರಮಬದ್ಧವಾಗಿರುತ್ತದೆ ಮತ್ತು ಅದರಿಂದ ಹೆಚ್ಚು ಪ್ರಯೋಜನವಾಗುತ್ತದೆ. ಅದರಿಂದ ಜಗತ್ತನ್ನು ದೃಢಸಂಕಲ್ಪ ಮತ್ತು ಸ್ಥೈರ್ಯದಿಂದ ಎದುರಿಸುವ ವಿಶ್ವಾಸವುಂಟಾಗುತ್ತದೆ. ಹಾಗೆಯೇ ನಾವು ಪ್ರಾಮಾಣಿಕರಾಗಿರಬೇಕಾದುದು ಮತ್ತು ಕಾನೂನು ಕಟ್ಟಳೆಗಳಿಗೆ ಬದ್ಧರಾಗಿರಬೇಕಾದುದೂ ಅಷ್ಟೇ ಅಗತ್ಯವಾಗುತ್ತದೆ. ನಾವು ಭ್ರಷ್ಟಾಚಾರ ಮತ್ತು ಭ್ರಷ್ಟ ಚಾಳಿಗಳ ವಿರುದ್ಧ ಹೋರಾಡಬೇಕು. ಶ್ರಮದ ಕೆಲಸ, ಶಿಸ್ತು ಮತ್ತು ಬದ್ಧತೆ ಹಾಗೂ ದೃಢನಿರ್ಧಾರಗಳು ನಮ್ಮ ಬದುಕಿನ ವಾಹನಕ್ಕೆ ಚಕ್ರಗಳಾದರೆ ಎಂತಹ ಕಠಿಣ ಹಾದಿಯಾದರೂ ಹೋಗಿ ಗುರಿಯನ್ನು ತಲುಪಲು ಸಾಧ್ಯವಾಗುತ್ತದೆ. ಯುವಜನರಾದ ನೀವು ನಮ್ಮ ರಾಷ್ಟ್ರವು ಒಂದು ಆದರ್ಶಪ್ರಾಯ ಪ್ರಜಾಪ್ರಭುತ್ವದ, ಆರ್ಥಿಕ ಸಾಮರ್ಥ್ಯದ ಮತ್ತು ಪ್ರಗತಿಪರ ಸಮಾಜದ ಸ್ಥಾನ ಪಡೆಯುವಂತೆ ಅದನ್ನು ಮುಂದಕ್ಕೆ ಒಯ್ಯಬೇಕು. ಯಶಸ್ಸಿನ ಸಾಧನೆಗೆ ವಿಲಿಯಂ ಶೇಕ್ಸ್‌ಪಿಯರ್ ಹೇಳಿರುವಂತೆ "ನೀವು ಇತರರಿಗಿಂತ ಹೆಚ್ಚು ತಿಳಿಯಿರಿ; ಇತರರಿಗಿಂತ ಹೆಚ್ಚು ಕೆಲಸಮಾಡಿ". ನೀವು ನಿಮ್ಮ ಸಮಯವನ್ನು ಜಾಣತನದಿಂದ ಬಳಸಿಕೊಂಡು, ಜ್ಞಾನಸಂಪಾದನೆಗಾಗಿ ಹೆಚ್ಚು ಶ್ರಮವಹಿಸುತ್ತೀರಿ ಎಂದು ನಾನು ನಂಬಿದ್ದೇನೆ.

ನಿಮ್ಮ ಜೀವನದಲ್ಲಿ ಸುಲಭವಾಗಿ ಯಶಸ್ಸುಗಳಿಸುವ ಸಂದರ್ಭಗಳು ಬರಬಹುದು. ಹಾಗೆಯೇ, ಕಷ್ಟದ ಪರಿಸ್ಥಿತಿಗಳನ್ನು ಎದುರಿಸಬೇಕಾದ ಸಂದರ್ಭಗಳು ಉಂಟಾಗಬಹುದು. ಆದರೆ ನಾವು ಪ್ರಯತ್ನಶೀಲರಾದರೆ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮತ್ತು ಇತರ ಅವಕಾಶಗಳತ್ತ ನೋಡಲು ನಮ್ಮ ಪಾರಸ್ಪರಿಕ ಕ್ರಿಯೆಗೂ ಅನುಕೂಲವಾಗಬಹುದು. ಜೀವನದ ಸವಾಲುಗಳನ್ನು ಎದುರಿಸಲು ಮತ್ತು ಯಾವುದೇ ಅವಕಾಶಗಳನ್ನು ತಪ್ಪಿಸಿಕೊಳ್ಳದಿರಲು ಸಿದ್ಧರಾಗಿರಬೇಕೆಂದು ನಾನು ವಿದ್ಯಾರ್ಥಿಗಳಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಸಮಾಜವು ಪೂರ್ವಾಗ್ರಹ ಮತ್ತು ಸಾಮಾಜಿಕ ಅನಿಷ್ಟಗಳಿಂದ ಹೊರಬರುವಂತೆ ಜನರ ಮನಪರಿವರ್ತನೆ ಮಾಡಲೂ ಯುವ ಜನರಿಗೆ ಸಾಕಷ್ಟು ಅವಕಾಶವಿದೆ. ನಾನು ಒಂದು ಉದಾಹರಣೆ ಕೊಡುತ್ತೇನೆ. ಬಂಗಾಳದಲ್ಲಿ ರೇಖಾ ಕಾಳಂದಿ ಎಂಬ ಹನ್ನೊಂದು ವರ್ಷದ ಹುಡುಗಿ. ಬಡತನದಿಂದಾಗಿ ಆಕೆಯ ತಂದೆ-ತಾಯಿ ಅವಳನ್ನು ಬೇಗ ಮದುವೆ ಮಾಡಿ ಕೊಡಬೇಕೆಂದಿದ್ದರು. ಆದರೆ ರೇಖಾ ಬಾಲ ಕನ್ಯೆಯಾಗಲೂ ಒಪ್ಪಲಿಲ್ಲ. ತಾನು ತನ್ನ ಓದನ್ನು ಮುಂದುವರೆಸಬೇಕೆಂದೂ, ತನಗೆ ಉದ್ಯೋಗ ದೊರಕುವವರೆಗೂ ಮದುವೆಯಾಗುವುದಿಲ್ಲವೆಂದೂ ಹೇಳಿಬಿಟ್ಟಳು. ತನ್ನ ಶಾಲಾ ಸ್ನೇಹಿತರು ಮತ್ತು ಉಪಾಧ್ಯಾಯರ ಬೆಂಬಲದಿಂದ ತನ್ನ ತಂದೆ-ತಾಯಿಗಳಿಗೆ ಬಾಲ್ಯವಿವಾಹದ ಸಾಮಾಜಿಕ ಅನಿಷ್ಟ ಪದ್ಧತಿಯ ಪರಿಣಾಮಗಳ ಬಗೆಗೆ ಮನವರಿಕೆ ಮಾಡಿಕೊಟ್ಟಳು. ಆಕೆಯ ಪ್ರತಿರೋಧ ಆ ಭಾಗದ ಜನರಲ್ಲಿ ಬಾಲ್ಯ ವಿವಾಹದ ಅನಿಷ್ಟಗಳ ಬಗೆಗೆ ಜಾಗೃತಿ ಉಂಟುಮಾಡಲು ಕಾರಣವಾಯಿತು. ಈಗ ಆಕೆ ತನ್ನ ಶಿಕ್ಷಣವನ್ನು ಮುಂದುವರೆಸಿದ್ದಾಳೆ. ಆಕೆ ಒಳ್ಳೆಯ ಶಿಕ್ಷಣ ಪಡೆದು ನಮ್ಮ ದೇಶವನ್ನು ಒಂದು ಪ್ರಗತಿಪರ ದೇಶವನ್ನಾಗಿ ಕಟ್ಟಲು ಅವಳು ಶ್ರಮಿಸುತ್ತಾಳೆ ಎಂಬ ಭರವಸೆ ನನಗಿದೆ.

ಜನ ಸಮುದಾಯದಲ್ಲಿ ನಾನಾ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಜಾಗೃತಿ ಉಂಟುಮಾಡುವುದು ಮುಖ್ಯವಾಗುತ್ತದೆ. ನಾಗರಿಕ ಸಮಾಜ, ಸರ್ಕಾರೇತರ ಸಂಸ್ಥೆಗಳು ಮತ್ತು ಶಿಕ್ಷಿತ ಯುವಜನರು ಸಮಾಜ ಸೇವಾ ಕಾರ್ಯದಲ್ಲಿ ತೊಡಗಿ, ಸ್ಥಳೀಯ ಜನರೊಡನೆ ನಿರಂತರವಾಗಿ ಅಂತರ ಸಂಪರ್ಕವನ್ನಿಟ್ಟುಕೊಂಡು ಅವರಲ್ಲಿ ಜಾಗೃತಿ ಉಂಟು ಮಾಡಿ, ಅವರ ಸಾಮರ್ಥ್ಯ ಮತ್ತು ಕುಶಲತೆಗಳನ್ನು ರೂಪಿಸಿಕೊಳ್ಳಲು ನೆರವಾಗಬೇಕೆಂದು ನಾನು ಆಗಾಗ ಕರೆಕೊಟ್ಟಿದ್ದೇನೆ.

ಯುವಜನರು ನಮ್ಮ ಸಂಸ್ಕೃತಿಯ ಶ್ರೀಮಂತಿಕೆ ಮತ್ತು ವೈವಿಧ್ಯತೆಯನ್ನು ಅರ್ಥಮಾಡಿಕೊಂಡು, ಸತ್ಯ, ಸಹನೆ ಮತ್ತು ಸರ್ವರಿಗೆ ಗೌರವ, ಅದರಲ್ಲೂ ತಮ್ಮ ತಂದೆ ತಾಯಿಗಳು, ಉಪಾಧ್ಯಾಯರು ಮತ್ತು ಹಿರಿಯರಿಗೆ ಗೌರವ-ಈ ಪರಂಪರೆಯ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಬೇಕು. ಸಾಮರಸ್ಯ ಮತ್ತು ಸಹನೆಗಳ ನಮ್ಮ ರಾಷ್ಟ್ರದ ಜೀವಾಳ ಈ ಮೌಲ್ಯಗಳನ್ನು ಎತ್ತಿ ಹಿಡಿಯಲು ನೀವು ಪ್ರಯತ್ನಿಸಬೇಕು. ನಮ್ಮ ರಾಷ್ಟ್ರದ ಪ್ರತಿಯೊಂದು ಬಂಧವನ್ನೂ ಬಲಪಡಿಸಲು ಪ್ರತಿಯೊಬ್ಬರೂ ತಮ್ಮ ಪಾಲಿನ ಕಾಣಿಕೆ ಸಲ್ಲಿಸಬೇಕೆಂದು ದೇಶ ಅಪೇಕ್ಷಿಸುತ್ತದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನಂತಹ ಚಳವಳಿಗಳು ಅಂತಹ ರಾಷ್ಟ್ರೀಯ ಭಾವೈಕ್ಯತೆಯನ್ನು ಉತ್ತೇಜಿಸುವ ಸಹಕಾರದ ವಾತಾವರಣವನ್ನು ಸೃಷ್ಟಿಸುತ್ತವೆ.

ನಾವು ವಾಸಿಸುತ್ತಿರುವ ಭೂಗ್ರಹವು ಎದುರಿಸುತ್ತಿರುವ ಹವಾಮಾನ ಬದಲಾವಣೆಯನ್ನು ಅಲಕ್ಷ್ಯ ಮಾಡುವಂತಿಲ್ಲ. ನಿಮ್ಮಲ್ಲಿ ಪ್ರತಿಯೊಬ್ಬರು ಈ ಹಂಗಾಮಿನ ಅಂತ್ಯದೊಳಗಾಗಿ ಒಂದು ಸಸಿ ನೆಡುವ ಪ್ರತಿಜ್ಞೆ ಕೈಗೊಳ್ಳಬೇಕು. ಅತ್ಯಂತ ಕೊರತೆಯ ಸಂಪನ್ಮೂಲಗಳಾಗಿರುವ ನೀರು ಮತ್ತು ವಿದ್ಯುಚ್ಛಕ್ತಿಗಳನ್ನು ಎಚ್ಚರದಿಂದ ಬಳಸಿ. ಅವನ್ನು ವ್ಯರ್ಥ ಮಾಡಬೇಡಿ. ಬಳಸಿದ ಬಟ್ಟೆಗಳನ್ನು ಸಂಗ್ರಹಿಸಿ, ಬಡವರಿಗೆ, ಹಂಚಿ. ಬಳಸದೆ ಉಳಿದ ಔಷಧಿಗಳನ್ನು ಬಡರೋಗಿಗಳಿಗೆ ಬಳಸಲು ವೈದ್ಯರಿಗೆ ಕೊಡಿ. ನಿಮ್ಮ ನಗರ, ಪಟ್ಟಣ ಮತ್ತು ಹಳ್ಳಿಯನ್ನು ಸ್ವಚ್ಛವಾಗಿಡುವ ನಾಗರಿಕ ಪ್ರಜ್ಞೆಯನ್ನು ಉಂಟುಮಾಡಿ. ಈ ಮೂರು ಸಲಹೆಗಳನ್ನು ನಿಮ್ಮ ನಿತ್ಯ ಜೀವನದಲ್ಲಿ ಪಾಲಿಸಲು ಮತ್ತು ನಿಮ್ಮ ಯುವ ಸ್ನೇಹಿತರಲ್ಲಿ ಇವನ್ನು ಉತ್ತೇಜಿಸಿ ಪ್ರಚಾರ ಮಾಡಲು ನಿಮಗೆ ಸಾಧ್ಯ ಎಂದು ನಾನು ತಿಳಿದಿದ್ದೇನೆ. ನಮ್ಮ ಪರಿಸರವನ್ನು ಚೊಕ್ಕಟವಾಗಿಟ್ಟುಕೊಳ್ಳುವ, ಹಾಗೆಯೇ ವಾಯು ಮಾಲಿನ್ಯವನ್ನು ತಗ್ಗಿಸುವ ಹಾಗೂ ಹವಾಮಾನ ಬದಲಾವಣೆಯನ್ನು ನಿಭಾಯಿಸುವ ಪ್ರಯತ್ನದಲ್ಲಿ ಇದು ಮುಖ್ಯವಾದ ವೈಯಕ್ತಿಕ ಕಾಣಿಕೆಯಾಗುತ್ತದೆ.

ಈ ವರ್ಷವನ್ನು ಸ್ಕೌಟಿಂಗ್ ಶತಮಾನೋತ್ಸವ ವರ್ಷವೆಂದು ಆಚರಿಸಲಾಗುತ್ತದೆ.

ಬೇಡನ್ ಪೊವೆಲ್ ಅವರು ಭಾರತದಲ್ಲಿ ಈ ಚಳವಳಿಯನ್ನು ಆರಂಭಿಸಿದರು. 1909ರಲ್ಲಿ ಬೆಂಗಳೂರಿನಲ್ಲಿ ಮೊದಲ ಸ್ಕೌಟ್ ಘಟಕವನ್ನು ಸ್ಥಾಪಿಸಲಾಯಿತು. ಸ್ಕೌಟ್ ಇತಿಹಾಸದಲ್ಲಿ ನೂರು ವರ್ಷಗಳನ್ನು ತುಂಬಿದ ಈ ಸಂದರ್ಭ ಸ್ಮರಣೀಯವಾದುದು. ಇದು ಮುಂಬರುವ ವರ್ಷಗಳಲ್ಲಿ ಹೊಸ ಸವಾಲುಗಳನ್ನು ಎದುರಿಸಲು ಸಂಸ್ಥೆಗೆ ಸ್ಫೂರ್ತಿಯಾಗಬೇಕು. ಇಂದು ಸ್ಕೌಟ್ ಮತ್ತು ಗೈಡ್ ಚಳವಳಿ ಭಾರತದ ಎಲ್ಲ ರಾಜ್ಯಗಳಲ್ಲೂ ವ್ಯಾಪಿಸಿರುವ ಜಾಲಬಂಧವನ್ನು ಹೊಂದಿದೆ. ಈಗ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ 42.5 ಲಕ್ಷದಷ್ಟು ಸದಸ್ಯತ್ವವಿದ್ದು, ವಿಶ್ವದಲ್ಲೇ ಮೂರನೆಯ ಸ್ಥಾನದಲ್ಲಿದೆ ಎಂಬುದನ್ನು ತಿಳಿದು ನನಗೆ ತುಂಬ ಸಂತೋಷವೆನಿಸಿದೆ. ಈ ಚಳವಳಿಯಲ್ಲಿರುವ ಎಲ್ಲರಿಗೂ ನನ್ನ ಶುಭಾಶಯಗಳು.

ಈ ಮಹತ್ವದ ಚಳವಳಿಯಲ್ಲಿ ತೀವ್ರ ಆಸಕ್ತಿ ವಹಿಸಿ, ಚಳವಳಿಯನ್ನು ಸೇರಲು ಯುವಜನರಲ್ಲಿ ಸ್ಫೂರ್ತಿ ತುಂಬುತ್ತಿರುವ 80 ರ ಯುವಕ ಶ್ರೀ ರಾಮೇಶ್ವರ ಠಾಕೂರ್ ಅವರನ್ನು ನಾನು ಅಭಿನಂದಿಸುತ್ತೇನೆ. ಹಾಗೆಯೇ ಈ ಚಳವಳಿಯಲ್ಲಿ ಆಸಕ್ತಿ ಹೊಂದಿರುವ ಶ್ರೀ ವೀರಭದ್ರ ಸಿಂಗ್ ಅವರಿಗೂ ನನ್ನ ಅಭಿನಂದನೆಗಳು. ಇದು ನಮ್ಮೆಲ್ಲರಿಗೂ ಸ್ಫೂರ್ತಿದಾಯಕವಾಗಿದೆ. ವಂದನೆಗಳು.

ಜೈಹಿಂದ್



# ಅತಿವೃಷ್ಟಿ ಮತ್ತು ನೆರೆ ಪರಿಹಾರ ಕಾರ್ಯದಲ್ಲಿ ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಗಳ ಪಾತ್ರ

## ಗುಲ್ಬರ್ಗಾ

ದಿನಾಂಕ 8-10-2009 ರಂದು ಗುಲಬರ್ಗಾ ಜಿಲ್ಲೆಯ ಸುರಪೂರ ತಾಲೂಕಿನ ನೆರೆ ಹಾವಳಿಗೆ ತುತ್ತಾದ ಗಂಜಿಕೇಂದ್ರಗಳಿಗೆ ಹೋಗಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀಮತಿ ಶೀಲಾ ಸಿದ್ಧರಾಮ್ ಅವರ ನೇತೃತ್ವದಲ್ಲಿ ಸಂತ್ರಸ್ತರಿಗೆ ಆಹಾರ ಸಾಮಗ್ರಿಗಳಾದ ರೊಟ್ಟಿ, ಅನ್ನ, ಉಪ್ಪಿನಕಾಯಿ, ಬಿಸ್ಕಟ್, ನೀರಿನ ಪ್ಯಾಕೇಟ್‌ಗಳನ್ನು ಹಾಗೂ ಬಟ್ಟೆಗಳನ್ನು ವಿತರಿಸಲಾಯಿತು. ನಗರದ ಕಲ್ಪವೃಕ್ಷ ಮಹಿಳಾ ಸಂಘದವರು ಊಟದ ಪ್ಯಾಕೇಟುಗಳನ್ನು ತಯಾರಿಸಿ ಜಿಲ್ಲಾ ಸಂಸ್ಥೆಗೆ ನೀಡಿದ್ದರು. ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀಮತಿ ಕಮಲಾದೇವಿ ಎಂ. ಚಿಕ್ಕಮಠ, ಜಿಲ್ಲಾ ಗೈಡರ್, ಶ್ರೀ ಶ್ರೀಮಂತರಕುಂಬಾರ, ಸ್ಕೌಟ್ ಮಾಸ್ಟರ್, ಶ್ರೀಮತಿ ಸೀಮಾವತಿಭಟ್, ಗೈಡ್ ಕ್ಯಾಪ್ಟನ್ , ಶ್ರೀ ಶ್ರೀಮಹೇಶ, ಶ್ರೀ ವೀರಭದ್ರಯ್ಯ, ಡಿ.ಓ.ಸಿ. ಕೂಡಿದ ತಂಡವು ಮೊಟ್ಟಮೊದಲಿಗೆ ದೇವಲಾಪುರ ಗಂಜಿಕೇಂದ್ರಕ್ಕೆ ಹೋಗಿ ಅಲ್ಲಿಯೇ ಆಹಾರ ತಯಾರಿಸಿ ವಿತರಿಸಿತು. ನಂತರ ಹುಣಸಹೊಳೆ ಗ್ರಾಮದ ಶ್ರೀಕನ್ವ ಮಠಕ್ಕೆ ಹೋಗಿ ಬಟ್ಟೆ ಆಹಾರ ಸಾಮಗ್ರಿ ವಿತರಿಸಿದರು. ತಿಂತನಿ ಗ್ರಾಮಕ್ಕೆ ಹೋಗಿ ನೀರಿನ ಪ್ಯಾಕೇಟು, ಆಹಾರ, ಬಟ್ಟೆ, ಬಿಸ್ಕತ್ತುಗಳನ್ನು ಬಿಸ್ಕತ್ತುಗಳನ್ನು ಶ್ರೀ ಚಂದ್ರಶೇಖರ ಸುರೇಪೇಟಕರ ಜಿಲ್ಲಾ ಪರಿಹಾರ ನಿಧಿಯ ನೋಡಲ್ ಅಧಿಕಾರಿಗಳು ಹಾಗೂ ಶ್ರೀ ಹೊನ್ನಯ್ಯ ಉಪತಹಸಿಲ್ದಾರ ಸುರಪೂರ ಇವರು ಉಪಸ್ಥಿತರಿದ್ದು, ಭಾರತ್ ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ ಧನ್ಯವಾದವನ್ನು ಗಂಜಿಕೇಂದ್ರದ ಪರವಾಗಿ ಹೇಳಿದರು ಹಾಗೂ ಸೇವೆಯನ್ನು ಶ್ಲಾಘಿಸಿದರು.

ಸಂಸ್ಥೆಯಲ್ಲಿ ಜಿಲ್ಲಾ ಅಯುಕ್ತೆಯಾಗಿ ಸೇವೆ ಸಲ್ಲಿಸಿದ ಹಿರಿಯ ನಾಯಕಿ ಶ್ರೀಮತಿ ಪದ್ಮಪ್ರಿಯ ಅವರ ನೇತೃತ್ವದ ತಂಡ ಬಿಳ್ಳುಂಡಗಿ ಗ್ರಾಮಕ್ಕೆ ಹೋಗಿ ನೆರೆಪರಿಹಾರ ನೀಡಿದ್ದಾರೆ. ಶ್ರೀಮತಿ ಎಂ. ಭಾರತಿ ಅವರ ನೇತೃತ್ವದ ತಂಡ ಅಫಜಲ್ ಪುರ ತಾಲೂಕಿನ ಕಡಕೋಳ ಗ್ರಾಮದಲ್ಲಿ ಪರಿಹಾರ ಸಾಮಗ್ರಿಗಳನ್ನು ನೀಡಿಬಂದಿದ್ದಾರೆ. ಅವರೊಂದಿಗೆ ಸ್ಕೌಟ್-ಗೈಡ್ ದಳನಾಯಕರು ಹಾಗೂ ರೋವರ್ಸ್, ರೇಂಜರ್ಸ್‌ಗಳು ಭಾಗಿಯಾಗಿ ಶಿಬಿರಗಳಲ್ಲಿ ಸೇವೆ ಸಲ್ಲಿಸಿರುತ್ತಾರೆ.

## ತುಮಕೂರು

## ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಕೆ.ಎಸ್. ಕಮಲ ಅವರಿಂದ ನೆರೆ ಪರಿಹಾರಿ ನಿಧಿಗೆ ರೂ. ಒಂದು ಲಕ್ಷ ಕೊಡುಗೆ

ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಅವರಿಗೆ ತುಮಕೂರು ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಕೆ.ಎಸ್. ಕಮಲ ಅವರು ನೆರೆ ಪರಿಹಾರ ನಿಧಿಗೆ ರೂ. ಒಂದು ಲಕ್ಷ ದೇಣಿಗೆ ನೀಡಿದರು. ಜಿಲ್ಲಾ ಆಡಳಿತ ವತಿಯಿಂದ ದಿನಾಂಕ 9-10-2009 ರಂದು ಅತಿವೃಷ್ಠಿ/ಪ್ರವಾಸ ಸಂಕಷ್ಟಕ್ಕೊಳಗಾದವರಿಗಾಗಿ ನಿಧಿ ಸಂಗ್ರಹಿಸುವ ಕಾರ್ಯಕ್ರಮದಲ್ಲಿ ಸಚಿವರು/ಶಾಸಕರು/ಜಿಲ್ಲಾ ಪಂಚಾಯ್ತಿ ಅಧ್ಯಕ್ಷರು ಹಾಗೂ ಸದಸ್ಯರು ಜಿಲ್ಲಾ ವಲಯದ ಅಧಿಕಾರಿಗಳು ಹಾಗು ಸ್ಕೌಟ್ಸ್/ಗೈಡ್ಸ್‌ಗಳು, ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

*She who Serves the poor is Great in the eyes of God.*

## ಬಳ್ಳಾರಿ

ಬಳ್ಳಾರಿ ಜಿಲ್ಲೆಯಲ್ಲಿ ಅತಿವೃಷ್ಠಿ ಹಾಗೂ ಪ್ರವಾಹದಿಂದ ಸಂಕಷ್ಟಕ್ಕೊಳಗಾದ ಒಂದು ಕುಟುಂಬಕ್ಕೆ ಬಳ್ಳಾರಿ ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆ ವತಿಯಿಂದ 1,00,000/- ರೂಪಾಯಿಗಳನ್ನು ನೀಡಿ, ಸಂತ್ರಸ್ಥರ ಕುಟುಂಬಕ್ಕೆ ಮನೆ ಗಳನ್ನು ಕಟ್ಟಿಕೊಡಲು ತೀರ್ಮಾನಿಸಲಾಯಿತು.

ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಜಿಲ್ಲಾ ಪದಾಧಿಕಾರಿಗಳು ದಿನಾಂಕ 14-10-2009 ರಂದು ಜಿಲ್ಲಾಧಿಕಾರಿಗಳಾದ ಶ್ರೀ ಬಿ ಶಿವಪ್ಪನವರನ್ನು ಭೇಟಿಮಾಡಿ, ಜಿಲ್ಲಾ ಸಂಸ್ಥೆ ತೀರ್ಮಾನಿಸಿದ ವಿಷಯವನ್ನು ಲಿಖಿತ ಮುಖಾಂತರ ನೀಡಿದರು.

## ದಾವಣಗೆರೆ

ಜಿಲ್ಲಾ ಸಂಸ್ಥೆಯು ದಿನಾಂಕ : 8-10-2009 ರಿಂದ 10-10-2009ರ ವರೆಗೆ ನಗರದ ಪೆಟ್ರೋಲ್ ಬಂಕ್‌ಗಳಲ್ಲಿ ವಾಹಗಳ ಸವಾರರು ನೀಡಿದ ವಂತಿಕೆಯನ್ನು ಸಂಗ್ರಹಿಸಿದ್ದಾರೆ. ಸ್ಕೌಟ್ಸ್, ಗೈಡ್ಸ್, ರೋವರ್ಸ್‌ಗಳು ತಾವು ಸಂಗ್ರಹಿಸಿದ ರೂ. 26,000/- ಹಣವನ್ನು ಕರ್ನಾಟಕ ಪ್ರಕೃತಿ ವಿಕೋಪ ಪರಿಹರ ನಿಧಿಗೆ ಸಮರ್ಪಿಸಿದ್ದಾರೆ.

ಜಿಲ್ಲಾ ಸಂಸ್ಥೆ ವತಿಯಿಂದ 5,000/- ರೂಗಳನ್ನು ಹಾಗೂ ಸ್ಕೌಟ್ಸ್ ಗೈಡ್ಸ್ ಮಕ್ಕಳು ಸಂಗ್ರಹಿಸಿದ ಹಣವನ್ನು ಕೂಡಾ ಸಂತ್ರಸ್ತರ ನೆರವಿಗೆ ನೀಡಿರುತ್ತಾರೆ. ಒಟ್ಟು 31,000/- ರೂಗಳನ್ನು ಜಿಲ್ಲಾಧಿಕಾರಿ ಶ್ರೀ ಕೆ. ಅಮರನಾರಾಯಣ ರವರನ್ನು ಭೇಟಿ ಮಾಡಿ ಹಸ್ತಾಂತರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಅಧ್ಯಕ್ಷರಾದ ಶ್ರೀ ಅಥಣಿ ಕೊಟ್ರೇಶ್ ಮತ್ತು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಚಿಗಟೇರಿ ಮತ್ತು ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಗದಗ

ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ರೋಣ ತಾಲೂಕಾ ಗಾಡಗೋಳ ಗ್ರಾಮಕ್ಕೆ ಭೇಟಿ ನೀಡಿ ಮಳೆ ಮತ್ತು ನೆರೆಯಿಂದಾಗಿ ಮನೆ ಕಳೆದುಕೊಂಡು ಶಿಬಿರಗಳಲ್ಲಿ ವಾಸಿಸುತ್ತಿರುವ ಸಂತ್ರಸ್ತರನ್ನು ಭೇಟಿಮಾಡಿ ಸಾಂತ್ವನ ಹೇಳಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯಿಂದ ಸಂತ್ರಸ್ತರುಗಳಿಗೆ 100 ಹೊದಿಕೆಗಳು ಹಾಗೂ ಬ್ರೆಡ್‌ನ್ನು ವಿತರಿಸಲಾಯಿತು. ಜಿಲ್ಲೆಯ ಎಲ್ಲಾ ತಾಲೂಕಾ ಸಂಸ್ಥೆಗಳ ಕಾರ್ಯದರ್ಶಿಗಳಿಗೆ ತಮ್ಮ ಭಾಗದ ಸ್ಕೌಟರ್ಸ್, ಗೈಡರ್ಸ್‌ರವರೊಂದಿಗೆ ಸಂತ್ರಸ್ತ'ರುಗಳಿಗಾಗಿ ನಿರ್ಮಿಸಿದ ಗಂಜಿ ಕೇಂದ್ರ ಮತ್ತು ಆಶ್ರಯ ಶೆಡ್‌ಗಳಿಗೆ ಭೇಟಿ ನೀಡಿ ಸೇವೆ ಸಲ್ಲಿಸಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಡಿ.ವ್ಹಿ. ಬೆಲ್ಲದ, ನಿವೃತ್ತ ಡಿಡಿಪಿಐ., ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಸುಮಾ ಗರಗ, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ನಾಗರತ್ನ ಮುಳಗುಂದ, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ವಿಜಯಲಕ್ಷ್ಮಿ ಅಂಗಡಿ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಬಿ.ಎ. ವಸ್ತ್ರದ, ಜಿಲ್ಲಾ ಕಾರ್ಯದರ್ಶಿ: ಶ್ರೀ ಎಸ್. ಎಸ್. ಥಾರ್ಗಿ, ಸ್ಕೌಟ್ ಮಾಸ್ಟರ್ ; ಶ್ರೀ ಆರ್. ಎಲ್. ಪುರಾಣಿಕ. ಅವರು ಸಂತ್ರಸ್ತರುಗಳ ಶಿಬಿರಗಳಿಗೆ ಭೇಟಿ ನೀಡಿ ತಾವು ತಂದಿದ್ದ ವಸ್ತ್ರ ಹಾಗೂ ಆಹಾರವನ್ನು ವಿತರಿಸಿದರು.

## ಬೆಳಗಾವಿ

ಮೂಡಲಗಿ ಶಿಕ್ಷಣ ಸಂಸ್ಥೆಯ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯದ ರೋವರ್ಸ್ ಘಟಕದಿಂದ ರೊಟ್ಟಿ, ಚಪಾತಿ, ಚಟ್ನಿ, ಬಿಸ್ಕತ್ತುಗಳನ್ನು ಸಂಗ್ರಹಿಸಿ ನೆರೆ ಸಂತ್ರಸ್ತರಿಗೆ ವಿತರಿಸಿದರು. ಸುಮಾರು 7 ಸಾವಿರ ರೊಟ್ಟಿ ಮತ್ತು ಚಪಾತಿಗಳು, ಬಿಸ್ಕತ್‌ಗಳು, ಚಟ್ನಿಪುಡಿ ಮತ್ತಿತರ ಆಹಾರ ವಿತರಿಸುವ ಮೂಲಕ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಂತ್ರಸ್ತರಿಗೆ ತಮ್ಮ ಅಳಿಲು ಸೇವೆ ಸಲ್ಲಿಸಿದರು.

ಕಾಲೇಜಿನ ಪ್ರಾಚಾರ್ಯ ಪ್ರೊ. ಬಿ.ಸಿ. ಪಾಟೀಲ. ಸ್ಕೌಟ್ಸ್ ನಾಯಕರಾದ ಪ್ರೊ. ವಿ.ಆರ್. ದೇವರೆಡ್ಡಿ ನೇತೃತ್ವದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಗಜಾನನ ಮನ್ನಿಕೇರಿ, ಸ್ಕೌಟ್ಸ್ ನಾಯಕರುಗಳಾದ ವಿ.ಎ. ಸಾತಪುತೆ, ಟಿ.ವಿ. ಗುದಗಾಪುರ, ಜಿ.ಪಂ. ಸದಸ್ಯೆ ಶ್ರೀಮತಿ ಭಾರತಿ ಪಾಟೀಲ, ಪ್ರೊ. ಸಂಗಮೇಶ ಗುಜಗೊಂಡ, ಡಾ. ಜಿ.ಸಿ. ಕಲಬುರ್ಗಿ ಸಮೀಪದ ನಾಗನೂರಿನ ಎರಡು ಗಂಜಿ ಕೇಂದ್ರಗಳಿಗೆ ತೆರಳಿ ಸಂತ್ರಸ್ತರಿಗೆ ಆಹಾರ ವಿತರಿಸಿದರು.



## ಬೆಂಗಳೂರು ದಕ್ಷಿಣ

ಬೆಂಗಳೂರು ದಕ್ಷಿಣ ಜಿಲ್ಲೆ, ಆನೇಕಲ್ ತಾಲ್ಲೂಕು ಸ್ಥಳೀಯ ಸಂಸ್ಥೆ ವ್ಯಾಪ್ತಿಯ ಭಗತ್ ಸಿಂಗ್ ಓಪನ್ ರೋವರ್ ತಂಡದ ವತಿಯಿಂದ ಸಂಗ್ರಹಿಸಲಾದ 10,000/- (ಹತ್ತು ಸಾವಿರ) ರೂಪಾಯಿಗಳ ನಗದನ್ನು ಉತ್ತರ ಕರ್ನಾಟಕ ಪ್ರವಾಹ ಪರಿಹಾರ ನಿಧಿಗೆ ದಿನಾಂಕ : 14-10-2009ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರಿಗೆ ತಂಡದ ನಾಯಕರಾದ ಶ್ರೀ ಎ.ಎನ್. ನರೇಂದ್ರಕುಮಾರ್ ಮತ್ತು ರೋವರ್ಸ್‌ಗಳು ಹಸ್ತಾಂತರಿಸಿದರು. ಈ ಸಂದರ್ಭದಲ್ಲಿ ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಜಂಟಿಕಾರ್ಯದರ್ಶಿ ಮತ್ತು ಶ್ರೀ ಎಂ.ಎ. ಚಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು ಉಪಸ್ಥಿತರಿದ್ದರು.

**ಕುಷ್ಟಗಿ ತಾಲ್ಲೂಕು ಬಿಜಗಲ್ ಹಾಗೂ ತಟಿಕಿಟಕಿ ಗ್ರಾಮದಲ್ಲಿ 250 ಸಂತ್ರಸ್ತರಿಗೆ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯವರು ರೂ. 45,000/- ರೂಗಳ ಸಾಮಾಗ್ರಿಗಳ ಕೊಡುಗೆ.**

ಜಿಲ್ಲಾ ಸಂಸ್ಥೆಯವರು ದಿನಾಂಕ 23-10-2009 ರಂದು ಕುಷ್ಟಗಿ ತಾಲ್ಲೂಕಿನ ಬಿಜಗಲ್ ಹಾಗೂ ತಟಕಿಟಕಿ ಗ್ರಾಮದ 150 ಸಂತ್ರಸ್ತರನ್ನು ಭೇಟಿಮಾಡಿ ಒಬ್ಬೊಬ್ಬ ಸಂತ್ರಸ್ತರಿಗೆ ಕುಟುಂಬಗಳಿಗೆ 1 ಪ್ಲೇಟ್, ಪಾತ್ರೆ, ಬೆಡ್‌ಶೀಟ್, ರಗ್‌ಗಳನ್ನು ವಿತರಿಸುತ್ತಾರೆ. ಐಸ್ಯಾಕ್ ನ್ಯೂಟನ್ ಆಂಗ್ಲ ಶಾಲೆ ಮತ್ತು ಕೆ.ಕೆ. ಆಂಗ್ಲ ಮಾಧ್ಯಮ ಶಾಲೆ ಜಂಟಿಯಾಗಿ ರೂ. 45,000/- ರೂ.ಗಳನ್ನು ಸಂಗ್ರಹಿಸಿ ಪ್ರವಾಹ ಸಂತ್ರಸ್ತರಿಗೆ ಸಾಮಾಗ್ರಿಗಳನ್ನು ನೀಡಿರುತ್ತಾರೆ.

ದಿನಾಂಕ : 22.10.2009. ರಂದು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಬೆಂಗಳೂರಿನಲ್ಲಿ ತಂಡಕ್ಕೆ ಶುಭಕೋರಿ ಬೀಳ್ಕೊಟ್ಟರು. ಶ್ರೀಯುತರಾದ ಎಂ.ಕೆ. ಖಾನ್, ಜಿಲ್ಲಾ ಮುಖ್ಯ ಆಯುಕ್ತರು, ಪಿ. ಪಳನಿ, ಜಿಲ್ಲಾ ಆಯುಕ್ತರು (ಸ್ಕೌ), ಎಂ.ಎಸ್. ಸತೀಶ್, ಜಿಲ್ಲಾ ಕಾರ್ಯದರ್ಶಿ ಶ್ರೀ ಜಿತೇಶ್ ಕುಮಾರ್, ಕಾರ್ಯದರ್ಶಿ, ಶ್ರೀ ಬಿ.ಎಸ್. ಅನಂತ್, ಜಿಲ್ಲಾ ಕ್ವಾರ್ಟರ್ ಮಾಸ್ಟರ್, ಇಕ್ಬಾಲ್ ಅಹಮದ್, ಸೂರಜ್ ಹಾಗೂ ಶ್ರೀ ವಿಠಲ್ ಇವರುಗಳು ಶ್ರೀ ಕೆ.ಎಸ್. ಸತ್ಯಮೂರ್ತಿ, ಜಿಲ್ಲಾಧಿಕಾರಿ, ಕೊಪ್ಪಳ ಜಿಲ್ಲೆ ಹಾಗೂ ಡಾ. ಬಿ.ಕೆ. ವರ್ದನ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ಭೇಟಿ ಮಾಡಿದರು. ಜಿಲ್ಲಾಧಿಕಾರಿಗಳ ಸೂಚನೆಯ ಮೇರೆಗೆ ಈ ತಂಡವು ಮೇಲ್ಕಂಡ ಗ್ರಾಮಗಳಿಗೆ ಭೇಟಿನೀಡಿ ಸಾಮಾಗ್ರಿಗಳನ್ನು ವಿತರಿಸಿ ಸಂತ್ರಸ್ತರಿಗೆ ಸಾಂತ್ವನ ನೀಡಿದರು. ಕೊಪ್ಪಳ ನಗರ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಲ್ಲಿ ತಂಗಿದ್ದ 4 ಸಂತ್ರಸ್ತರ ಕುಟುಂಬಗಳಿಗೆ ಸಾಮಾಗ್ರಿಗಳನ್ನು ನೀಡಲಾಯಿತು.

## ಕೊಪ್ಪಳ

ದಿನಾಂಕ: 23-11-2009 ರಂದು ಕೊಪ್ಪಳ ಜಿಲ್ಲಾ ಸಂಸ್ಥೆಯ ಸ್ಕೌಟ್ಸ್, ಗೈಡ್ಸ್, ಪದಾಧಿಕಾರಿಗಳು ಹಾಗೂ ಬೆಂಗಳೂರು ದಕ್ಷಿಣ ಜಿಲ್ಲೆಯ ಸದಸ್ಯರು, ಕೊಪ್ಪಳ ನಗರದಲ್ಲಿ ಸಂಚರಿಸಿ ರೂ. 11,611 ರೂಗಳನ್ನು ಸಂಗ್ರಹಿಸಿ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಶ್ರೀ ಕೆ.ಎಸ್. ಸತ್ಯಮೂರ್ತಿ, ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಿಸಿದರು. ಈ ಕಾರ್ಯಕ್ರಮದಲ್ಲಿ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀ ಜಯರಾಜ್ ಬೂಸದ್, ಶ್ರೀ ಯರ್ರಣ್ಣ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಸ್ಕೌಟರ್ ಮತ್ತು ಗೈಡರ್‌ಗಳ ಕಾರ್ಯಾಗಾರ

ದಿನಾಂಕ :21-10-2009 ರಂದು ದಾರವಾಡ ಜಿಲ್ಲಾ ಸ್ಕೌಟ್/ಗೈಡ್ ಭವನದಲ್ಲಿ ದಾರವಾಡ, ಗದಗ, ಉತ್ತರ ಕನ್ನಡ ಹಾಗೂ ಬೆಳಗಾಂ ಜಿಲ್ಲೆಗಳ ಸ್ಕೌಟರ್/ಗೈಡರ್‌ಗಳಿಗೆ ಕಾರ್ಯಾಗಾರ ಏರ್ಪಡಿಸಲಾಗಿತ್ತು. 27 ಸ್ಕೌಟರ್‌ಗಳು ಮತ್ತು 15 ಗೈಡರ್‌ಗಳು ಭಾಗವಹಿಸಿದ್ದರು.

ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಸ್ಕೌಟ್ಸ್ ಗೈಡ್ಸ್‌ಗಳ ಅರ್ಜಿಗಳು ಮತ್ತು ಮಾಹಿತಿ ಹಾಳೆಯನ್ನು ತಪ್ಪಾಗದಂತೆ ಭರ್ತಿಮಾಡುವ ವಿಧಾನ ಪ್ರಧಾನ ಮಂತ್ರಿಗಳ ಪಾರಿತೋಷಕ ಸ್ಪರ್ಧೆಯಲ್ಲಿ ಭಾಗವಹಿಸುವ ಬಗ್ಗೆ, ಲಾಗ್ ಪುಸ್ತಕ, ದಳಗಳ ನೋಂದಣಿ, ನವೀಕರಣ, ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಾರ್ಯಕ್ರಮಗಳ ಬಗ್ಗ ಕಾರ್ಯಾಗಾರದಲ್ಲಿ ಚರ್ಚಿಸಲಾಯಿತು.

ಶ್ರೀ ನಾರಾಯಣ ಶೆಟ್ಟಿ ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್ಸ್) ನಾಯಕರಾಗಿದ್ದು ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀಮತಿ ಪ್ರಭಾ ಲೋಂಡೆ, ಶ್ರೀ ಬಿ.ಕೆ. ಪಾಟೀಲ್, ಶ್ರೀ ಬಿ.ಡಿ. ಫರ್ನಾಂಡೀಸ್ ಸಹಾಯಕರಾಗಿದ್ದರು. ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದು ಸ್ಕೌಟರ್/ಗೈಡರ್‌ಗಳಿಗೆ ಹಿತನುಡಿ ನುಡಿದರು.

## Rashtrapathi Scout Testing Camp held at Dr. Annie Besant Park

The Rashtrapathi Scout Testing Camp was held from 27th to 31st Aug 2009 at Dr. Annie Besant Park, Doddaballapur. 35 Scouts from Karnataka attended the camp Sri P.S. Thyagarajan L.T. (S) from Tamilnadu was the Chief Examiner of the Testing Camp. Sri M.S. Sharma, Regional Organising Commissioner (S) was the Co-ordinator Camp

## Rashtrapathi Guide Testing Camp held at Kondajji

Regional Level Testing Camp for Rastrapathi Guide was held from 12th to 16th October 2009 at Kondajji Basappa Scouts and Guides Training Centre, Kondajji, Davanageri District. 304 Guides, 38 Guiders from 22 District of Karnataka and 10 Staff Members attended the testing camp. Smt. R. Veena, Regional Organising Commissioner (Guides) Southern Region was the Leader of the Camp. Smt. K. Shankaramma, L.T.(G) Andhra Pradesh was the Chief Examiner of the Testing Camp. Smt. Janaki Venugopal State Organising Commissioner (Guides) Co-ordinated the Camp.

## APR Training Course

**Sri Nagesh R. Shivapur,** ASOC(S), Belgaum District is selected to undergo Asia-Pacific Regional Course for Leader Trainers at International Youth Centre (IYC), Kuala Lumpur, Malaysia from 19th to 25th October 2009. It is first time that a professional of the Bharat Scouts and Guides, Karnataka has been provided an opportunity to undergo the Leader Trainer Course organised by the World Scout Bureau/Asia-Pacific Region, Manila.

We are grateful to the Bharat Scouts and Guides, National Headquarters, New Delhi and the World Scout Bureau/Asia-Pacific Region, Manila fro providing this opportunity to one of our professional to undergo the Training.

DAK SEWA JAN SEWA

## World's Largest Postal Network Celebrated World Post Day on 9th October 2009




**The Indian Postal Department Celebrated the World postal Day on 9th October 2009 & Observed the National Postal week from 9th -15th October 2009**

COMING EVENTS

## NATIONAL LEVEL STANDARD JUDGING CAMP

The Bharat Scouts and Guides, National Headquarters, New Delhi, is organising the National Level Standard Judging Camp from 9th to 13th January 2010 at National Youth Complex, Gadpuri, Palwal, Haryana State

Patrol Leaders completed who have Tritiya Sopan Badges are eligible to attend the event. The Patrol will be awarded 'A' and 'B' Standard if minimum 70% and 60 % marks are secured respectively. The following are the Subjects for competition. 1) Camp-Craft, 2) First Aid, 3) Patrol Pioneering, 4) Mapping, 5) Campfire, 6) Backwoods man Cooking, 7) Flag Ceremony, 8) Fire Rescue, 9) B.P. Exercise / Yoga, 10) Colour Party

ಜಿಲ್ಲಾ ವಾರ್ತೆ

# ಶಿವಮೊಗ್ಗ

## ಜಿಲ್ಲಾ ಕಬ್ಸ್-ಬುಲ್‌ಬುಲ್ಸ್ ಮತ್ತು ಶಿವಮೊಗ್ಗ ತಾಲ್ಲೂಕು ಸ್ಕೌಟ್-ಗೈಡ್ ಮೇಳ

ದಿನಾಂಕ: 19-9-2009 ರ ಬೆಳಗ್ಗೆ ಜಿಲ್ಲಾ ಸ್ಕೌಟ್ ಗೈಡ್ ಭವನದ ಆವರಣದಲ್ಲಿ ಮೇಲ್ಕಂಡ ಮೇಳವು ಆರಂಭವಾಯಿತು. ಈ ಮೇಳದಲ್ಲಿ ಶಿವಮೊಗ್ಗ ಜಿಲ್ಲೆಯ 450 ಕಬ್, ಬುಲ್‌ಬುಲ್‌ಗಳು ಭಾಗವಹಿಸಿದ್ದರು. ಈ ಮೇಳದ ಧ್ವಜಾರೋಹಣವನ್ನು ಜಿಲ್ಲಾ ಪ್ರಭಾರ ಸ್ಕೌಟ್ ಆಯುಕ್ತರಾದ ಶ್ರೀ ಕೆ. ಗಣಪತಿ ಮತ್ತು ಜಂಟಿ ಕಾರ್ಯದರ್ಶಿ ಶ್ರೀಮತಿ ಪಿ. ಸುಮಂಗಳಾರವರು ನೆರವೇರಿಸಿ ಶುಭ ಹಾರೈಸಿದರು.

ಮಧ್ಯಾಹ್ನ ಪಥ ಸಂಚಲನವನ್ನು ಶಿವಮೊಗ್ಗ ಜಿಲ್ಲಾ ರಕ್ಷಣಾಧಿಕಾರಿಗಳಾದ ಶ್ರೀ ಎಸ್. ಮುರುಗನ್ ರವರು ಹಸಿರು ನಿಶಾನೆ ತೋರಿಸುವುದರ ಮೂಲಕ ಉದ್ಘಾಟಿಸಿದರು. ಅತಿಥಿಗಳಾಗಿ ಶ್ರೀ ಪರಮೇಶ್ವರಪ್ಪ, ಕಮಾಂಡೆಂಟ್, ಜಿಲ್ಲಾ ಗೃಹ ರಕ್ಷಕದಳದವರು ಆಗಮಿಸಿದ್ದರು. ಸಂಜೆ ಮೇಳದ ಉದ್ಘಾಟನಾ ಸಮಾರಂಭ ನಡೆಯಿತು. ಸನ್ಮಾನ್ಯ ಶ್ರೀ ಕೆ.ಎಸ್. ಈಶ್ವರಪ್ಪ, ಇಂಧನ ಸಚಿವರು, ಕರ್ನಾಟಕ ಸರ್ಕಾರ ಇವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿ "ನಾಯಕತ್ವ ಬೆಳವಣಿಗೆಗೆ ಸಹಕಾರಿಯಾದ ಸ್ಕೌಟ್ ಮತ್ತು ಗೈಡ್ಸ್ ಕಾರ್ಯಕ್ರಮಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆಯಬೇಕು" ಎಂದು ಹೇಳಿದರು. ಆನಂತರ ಶತಮಾನೋತ್ಸವ ಸ್ಮರಣೆಗಾಗಿ ಕಟ್ಟಿಸಲಿರುವ ಕಟ್ಟಡಕ್ಕೆ ಶಾಸಕರ ನಿಧಿಯಿಂದ 5 ಲಕ್ಷ ರೂಪಾಯಿ ಮಂಜೂರು ಮಾಡಿರುವುದಾಗಿ ತಿಳಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿರವರು 62 ಮಕ್ಕಳಿಗೆ ಸಮವಸ್ತ್ರವನ್ನು ಉಚಿತವಾಗಿ ಪ್ರದಾನ ಮಾಡಿದರು.

ರಾತ್ರಿ ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶಿಬಿರಾಗ್ನಿ ಉದ್ಘಾಟನೆಯನ್ನು ಜಿಲ್ಲಾ ತರಬೇತಿ ಶಿಕ್ಷಣ ಕೇಂದ್ರದ ಪ್ರಾಂಶುಪಲರಾದ ಶ್ರೀಮತಿ ಜಿ.ಪಿ. ಚಂದ್ರಮ್ಮನವರು ನೆರವೇರಿಸಿದರು. ದಿನಾಂಕ : 20-09-2009 ರ ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಆನಂತರ ಸಾಹಸ ಚಟುವಟಿಕೆಗಳ ಉದ್ಘಾಟನೆಯನ್ನು ಶಿವಮೊಗ್ಗ ನಗರಸಭೆ ಅಧ್ಯಕ್ಷರಾದ ಶ್ರೀ ಎನ್. ಜೆ. ರಾಜಶೇಖರ್ ರವರು ನೆರವೇರಿಸಿದರು. ಶ್ರೀಯುತರು ಮಾತನಾಡುತ್ತಾ 1,00 ಜೊತೆ ಸಮವಸ್ತ್ರಗಳಿಗಾಗಿ ರೂ. 25 ಸಾವಿರ ಮಂಜೂರು ಮಾಡಿರುವುದಾಗಿ ತಿಳಿಸಿದರು. ಶಿವಮೊಗ್ಗ ವಿಜಯಾ ಬ್ಯಾಂಕಿನ ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ ಶ್ರೀ ಉದಯಕುಮಾರ್ ಅತಿಥಿಯಾಗಿ ಭಾಗವಹಿಸಿದ್ದರು.

ಮಧ್ಯಾಹ್ನ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಭಾಗವಹಿಸಿದ ಮಕ್ಕಳಿಗೆ ಪ್ರಶಸ್ತಿ ಪತ್ರಗಳ ವಿತರಣೆ ಮಾಡಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಸರ್ವರಿಗೂ ಸ್ವಾಗತವನ್ನು ಬಯಸಿ ಪ್ರಾಸ್ತಾವಿಕ ನುಡಿಗಳನ್ನು ಹೇಳಿದರು. ಮೇಳದ ವರದಿಯನ್ನು ಶ್ರೀ ಎಂ.ಜಿ. ಶಿವಕುಮಾರ್, ಜಿಲ್ಲಾ ತರಬೇತಿ ಆಯುಕ್ತರು ವಾಚಿಸಿದರು. ಶ್ರೀ ಎಸ್.ಜಿ. ಆನಂದ್ ಮತ್ತು ಇತರರಿಗೆ ಸೇವಾ ಪದಕಗಳನ್ನು ವಿತರಿಸಿ ಗೌರವಿಸಲಾಯಿತು. ಕೊನೆಯಲ್ಲಿ ಶ್ರೀ ಹೆಚ್. ಡಿ. ಉದಯ ಶಂಕರ ಶಾಸ್ತ್ರಿ, ಸಹ ಕಾರ್ಯದರ್ಶಿಗಳ ವಂದನಾರ್ಪಣೆಯೊಂದಿಗೆ ಮೇಳವು ಮುಕ್ತಾಯವಾಯಿತು.

# ಬಳ್ಳಾರಿ

## ಹೊಸಪೇಟೆ ತಾಲೂಕು ರಾಜ್ಯ ಪುರಸ್ಕಾರ ಸ್ಕೌಟ್ಸ್ ಗೈಡ್ಸ್‌ಗಳಿಗೆ ಪೂರ್ವಬಾವಿ ತರಬೇತಿ ಶಿಬಿರ

ಹೊಸಪೇಟೆ ತಾಲೂಕು ಸ್ಕೌಟ್ಸ್ ಗೈಡ್ಸ್‌ಗಳಿಗೆ ರಾಜ್ಯ ಪುರಸ್ಕಾರ ಪೂರ್ವಬಾವಿ ತರಬೇತಿ ಶಿಬಿರವನ್ನು ದಿನಾಂಕ 3-10-2009 ರಿಂದ 5-10-2009 ರಿಂದ ರವರೆಗೆ ವಿವೇಕಾನಂದ ಸರಕಾರಿ ಹಿರಿಯ ಪ್ರಾಥಮಿಕ ಶಾಲಾ ಆವರಣದಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ 90 ಸ್ಕೌಟ್ಸ್ - ಗೈಡ್ಸ್‌ಗಳು ಭಾಗವಹಿಸಿದ್ದರು. ಮಕ್ಕಳಿಗೆ ಗಂಟುಗಳು, ಪ್ರಥಮ ಚಿಕಿತ್ಸೆ ದಿಕ್ಸೂಚಿ ಹಾಗೂ ಎಸ್ಟಿಮೇಟ್ ವಿಷಯಗಳ ಬಗ್ಗೆ ಬೋಧನೆ ಮಾಡಲಾಯಿತು. ದಿನಾಂಕ 4-10-2009 ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಆರ್. ವೆಂಕಣ್ಣ ಹಾಗೂ ಶ್ರೀ ಮಹಮದ್ ಭಾಷ ಜಿಲ್ಲಾ ಸಂಘಟಕರು ಹಾಜರಿದ್ದು ಮಕ್ಕಳಿಗೆ ತಮ್ಮ ಮುಂದಿನ ತರಬೇತಿಯ ಬಗ್ಗೆ ಜಿಲ್ಲಾ ಮುಖ್ಯ ಆಯುಕ್ತರು ವಿವರಣೆ ಕೊಟ್ಟರು. ಸ್ಕೌಟರ್ಸ್/ ಗೈಡರ್ಸ್ ಸಮಾವೇಶ ನಡೆಸಿ ಡಿಸೆಂಬರ್ 2009ರಲ್ಲಿ ನಡೆಯುವ ರಾಜ್ಯ ಮಟ್ಟದ ಜಾಂಬೋರಿ ಬಗ್ಗೆ ತಿಳಿಸಿದರು.

ಈ ಶಿಬಿರದಲ್ಲಿ ಶ್ರೀ ರಾಜಶೇಖರ, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಹೊಸಪೇಟೆ ಇವರು ನಾಯಕರಾಗಿದ್ದರು.

**ಹೊಸಪೇಟೆ ತಾಲೂಕಿನಲ್ಲಿ ಸಾಹಸ ಚಟುವಟಿಕೆಗಳ ಶಿಬಿರ**

ದಿನಾಂಕ 31-8-2009 ರಂದು ಹೊಸಪೇಟೆ ತಾಲೂಕಿನ ಸ್ಕೌಟ್ಸ್ ಗೈಡ್ಸ್‌ಗಳಿಗೆ ಸಾಹಸ ಚಟುವಟಿಕೆಗಳ ಶಿಬಿರವನ್ನು ಹಂಪಿ ಸಮೀಪದಲ್ಲಿರುವ ಅಕ್ಕ-ತಂಗಿಯರ ಗುಡ್ಡದ ಪ್ರದೇಶದಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಗೋಡೆ ಹತ್ತುವುದು ಗುಡ್ಡ ಏರುವುದು, ಪರಿಸರ ಅಧ್ಯಯನ ಏರ್ಪಡಿಲಾಗಿತ್ತು. ಈ ಶಿಬಿರದಲ್ಲಿ ಹೊಸಪೇಟೆ ತಾಲೂಕಿನಿಂದ 120 ಸ್ಕೌಟ್ಸ್-ಗೈಡ್ಸ್ ಗಳು ಭಾಗವಹಿಸಿದ್ದರು.

**ರಾಜ್ಯ ಪುರಸ್ಕಾರ ಪ್ರಶಸ್ತಿ ಪದಕಗಳ ವಿತರಣಾ ಸಮಾರಂಭ**

ದಿನಾಂಕ 1-10-2009ರಂದು ಸ್ಕೌಟ್ಸ್-ಗೈಡ್ಸ್ ಭವನ ಬಳ್ಳಾರಿಯಲ್ಲಿ ರಾಜ್ಯ ಪುರಸ್ಕಾರ ಮಕ್ಕಳಿಗೆ ಪ್ರಶಸ್ತಿ ಪ್ರದಾನ ಸಮಾರಂಭ ಏರ್ಪಡಿಸಲಾಗಿತ್ತು. ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಕೆ. ವೀರೇಶ್, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಶಾಂತಲಕ್ಷ್ಮಿ ಜಯರಾಮ್, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀ ಎಮ್. ಟಿ. ಮಲ್ಲೇಶ್, ಸಹಾಯಕ ಆಯುಕ್ತರು (ಸ್ಕೌಟ್ಸ್), ಹಾಗೂ ಶ್ರೀ ಎಮ್. ಎ. ಶಕೀಬ್ ಕಾರ್ಯದರ್ಶಿ ಹಾಜರಿದ್ದು ಪ್ರಶಸ್ತಿಗಳನ್ನು ವಿತರಣೆ ಮಾಡಿದರು. ಶ್ರೀ ಪಿ. ಶಾಂತಮೂರ್ತಿ ಗ್ರಾಮ ಲೆಕ್ಕಾಧಿಕಾರಿಗಳು ಮೋಕ ಇವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಮತ್ತು ಅತಿಥಿಗಳಿಗೆ ಸಿಹಿ ತಿಂಡಿ ನೀಡಿದರು.

## ದಕ್ಷಿಣ ಕನ್ನಡ

ದಿನಾಂಕ 16-09-2009ರಂದು ಅಂತರಾಷ್ಟ್ರೀಯ ಶಾಂತಿ ದಿನಾಚರಣೆಯ ದಿನ ಎಸ್.ಎಂ. ಕುಶೆ ಅತ್ತಾವರ ಇಲ್ಲಿಯ ರೋವರ್, ರೇಂಜರ್‌ಗಳು ಅತ್ತಾವರ ಪರಿಸರದಲ್ಲಿ ಮಲೇರಿಯಾ ಸಂರಕ್ಷಣೆಯ ಬಗ್ಗೆ ಮನೆ-ಮನೆಗಳಿಗೆ ಭೇಟಿ ನೀಡಿ ಮಾಹಿತಿ ನೀಡಿದರು, ಹಾಗೂ ಅತ್ತಾವರದ ಪರಿಸರದ ಅಂಗಡಿಗಳಿಗೆ ಕಸವನ್ನು ವಿಲೇವಾರಿ ಮಾಡುವ ಬಗ್ಗೆ ಮಾಹಿತಿ ನೀಡುವ ಕಾರ್ಯಕ್ರಮ ನಡೆಸಿದರು. ದಿನಾಂಕ 19-09-2009 ರಿಂದ 21-09-2009 ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ರೋವರ್ ರೇಂಜರ್‌ಗಳಿಗೆ ಮೇಟ್ ತರಭೇತಿ ಶಿಬಿರ ದ.ಕ. ಜಿಲ್ಲಾ ತರಬೇತಿ ಕೇಂದ್ರದಲ್ಲಿ ಶ್ರೀ ಪ್ರತಿಮ್ ಕುಮಾರ್ ರವರ ನಾಯಕತ್ವದಲ್ಲಿ ನಡೆಸಲಾಯಿತು, ಜಿಲ್ಲೆಯ ವಿವಿಧ ಕಾಲೇಜ್‌ಗಳ 68 ರೋವರ್ ರೇಂಜರ್‌ಗಳು ಸಕ್ರಿಯವಾಗಿ ಭಾಗವಹಿಸಿದರು.

ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆಯ ಜಂಟಿ ಆಶ್ರಯದಲ್ಲಿ ದಿನಾಂಕ:29-09-2009 ರಿಂದ 5-10-09 ರ ವರೆಗೆ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ವಾಮಂಜೂರು ಇಲ್ಲಿ ಏರ್ಪಡಿಸಲಾಗಿತ್ತು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಫಿಲೋಮಿನ ಲೋಬೋ ತರಬೇತಿ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀರಾಮಶೇಷ ಶೆಟ್ಟಿ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಐ.ಎ. ಕೈರನ್ನ ಶಿಬಿರಕ್ಕೆ ಭೇಟಿ ನೀಡಿದರು. ಈ ತರಬೇತಿ ಶಿಬಿರದ ನಾಯಕ-ನಾಯಕಿಯರಾಗಿ ಕಬ್ಸ್ ವಿಭಾಗಕ್ಕೆ ಶ್ರೀರಾಮರಾವ್, ಸ್ಕೌಟ್ಸ್ ವಿಭಾಗಕ್ಕೆ ಶ್ರೀ ಹರ್ಷಕುಮಾರ್, ಬುಲ್ ಬುಲ್ಸ್ ವಿಭಾಗಕ್ಕೆ ಸಿಸ್ಟರ್ ಲೊರಿನ, ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಜಯವಂತಿ ಸೋನ್ಸ್ ಕರ್ತವ್ಯ ನಿರ್ವಹಿಸಿದರು.

ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆಯ ಜಂಟಿ ಆಶ್ರಯದಲ್ಲಿ ದಿನಾಂಕ: 29-09-2009 ರಿಂದ 5-10-2009 ರ ವರೆಗೆ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಎಸ್.ವಿ.ಎಸ್. ಆಂಗ್ಲ ಮಾಧ್ಯಮ ಶಾಲೆ, ಬಂಟ್ವಾಳ ಇಲ್ಲಿ ಏರ್ಪಡಿಸಲಾಗಿತ್ತು. ತರಬೇತಿ ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೆ. ಸುಧಾಕರ್ ಬಂಟ್ವಾಳ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು. ಶ್ರೀಮತಿ ರವಿ ವೆಸ್ಲಿ, ರಾಜ್ಯ ಗೈಡ್ ಆಯುಕ್ತೆ ಈ ತರಬೇತಿ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ. ಎ. ಕೈರನ್ನ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಯು. ಗೋಪಾಲಕೃಷ್ಣ ಭಟ್ ಶಿಬಿರಕ್ಕೆ ಭೇಟಿ ಇತ್ತರು. ಬನ್ನಿ ತರಬೇತಿ ಶಿಬಿರಕ್ಕೆ ರಾಜ್ಯ ಗೈಡ್ ಆಯುಕ್ತೆ ಶ್ರೀಮತಿ ರವಿ ವೆಸ್ಲಿ, ಸ್ಕೌಟ್ ವಿಭಾಗಕ್ಕೆ ಶ್ರೀ ಬಿ.ಯಂ. ತುಂಬೆ, ಕಬ್ಸ್ ವಿಭಾಗಕ್ಕೆ ಸಿಸ್ಟರ್ ಜುಲಿಯನ ಲಸ್ರಾದೋ, ಬುಲ್ ಬುಲ್ಸ್ ವಿಭಾಗಕ್ಕೆ ಶ್ರೀಮತಿ ವಿಮಲಾ ಬಾಯಿ, ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಚಂದ್ರಕಲಾರವರು ನಾಯಕರಾಗಿ ಕರ್ತವ್ಯ ನಿರ್ವಹಿಸಿದರು.

## ತುಮಕೂರು

ಸ್ಥಳೀಯ ಸಂಸ್ಥೆ ತುರುವೇಕೆರೆ ಹಾಗೂ ತುರುವೇಕೆರೆ ತಾಲ್ಲೂಕು ಹರಿವಾಸನ ಹಳ್ಳಿ "ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ" ಯ ಸಹಯೋಗದೊಂದಿಗೆ ತಾರೀಖು 01-09-2009 ರಂದು ಹರಿವಾಸನಹಳ್ಳಿಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ, ತುರುವೇಕೆರೆ ತಾಲ್ಲೂಕು ಸ್ಕೌಟರ್ಸ್-ಗೈಡರ್ಸ್ ಪುನಶ್ಚೇತನ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಾಗಾರದಲ್ಲಿ ತಾಲ್ಲೂಕಿನಾದ್ಯಂತ 54 ಶಿಕ್ಷಕ-ಶಿಕ್ಷಕಿಯರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಎಲ್ಲಾ ಸಿ.ಆರ್.ಪಿ., ಬಿ.ಆರ್.ಪಿ., ಸಿ.ಎ.ಇ.ಓ., ಗಳವರು ಭಾಗವಹಿಸಿ ಕಾರ್ಯಾಗಾರ ಯಶಸ್ವಿಯಾಗಿ ನಡೆಸಲು ಸಹಕರಿಸಿದರು.

# ಗದಗ

## ವನಮಹೋತ್ಸವ ಕಾರ್ಯಕ್ರಮ

ದಿನಾಂಕ: 11-09-09 ರಂದು ನರಗುಂದ ಪಟ್ಟಣ ವಿವೇಕಾನಂದ ಶಿಕ್ಷಕರ ಕಾಲನಿಯಲ್ಲಿಯ ಸ್ಕೌಟ್ ನಿವೇಶನದಲ್ಲಿ ನೂತನ ತಹಶೀಲ್ದಾರರು ಹಾಗೂ ತಾಲೂಕ್ ಸ್ಕೌಟ್ ಸಂಸ್ಥೆ ಅಧ್ಯಕ್ಷರಾದ ಶ್ರೀಮತಿ ರೇಣುಕಾಂಭಾ ಮುಖಂಡತ್ವದಲ್ಲಿ, ವನಮಹೋತ್ಸವ ಕಾರ್ಯಕ್ರಮ ನಡೆಯಿತು. ಕಾರ್ಯಾಧ್ಯಕ್ಷರಾದ ಶ್ರೀ ಎಂ.ಆರ್. ಕಾಳೆ, ಉಪಾಧ್ಯಕ್ಷರಾದ ಶ್ರೀ ವಿ.ಎಸ್. ಚಲವಾದಿ ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು. ಶಹರ ವಲಯದ ವಿವಿಧ ಶಾಲೆಗಳಿಂದ ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

# ಕೊಪ್ಪಳ

ಕೊಪ್ಪಳ ನಗರದಲ್ಲಿ ದಿನಾಂಕ: 10-08-2009ರಂದು ಶ್ರೀ ನಂದೀಶ್ವರ ಶಿಕ್ಷಣ ಸಂಸ್ಥೆಯಲ್ಲಿ ಸ್ಕೌಟ್-ಗೈಡ್ ಘಟಕಗಳನ್ನು ನೂತನವಾಗಿ ಪ್ರಾರಂಭಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಶಿವಪ್ಪ ಶೆಟ್ಟರು ವಹಿಸಿದ್ದರು. ಶ್ರೀ ಅಶೋಕ್ ಭದ್ರಶೆಟ್ಟಿ, ಐ.ಇ.ಓ., ಶ್ರೀ ಅಂಗಣ್ಣ ಮೇಟಿ, ಉಪನ್ಯಾಸಕರು, ಶ್ರೀ ಜಯರಾಜ್ ಬೂಸದ್, ಡಿ.ಟಿ.ಸಿ., ಶ್ರೀ ಖಾಜಾವಲಿ ಕುದರಿಮೋತಿ, ಎಚ್.ಎಂ. ಹಾಗೂ ಶಾಲಾ ಸಿಬ್ಬಂದಿವರ್ಗದ ಪೋಷಕರೆಲ್ಲರೂ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ್ದರು.

# ದಾವಣಗೆರೆ

ದಾವಣಗೆರೆ ಜಿಲ್ಲೆಯಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಗಮನಿಸಲು 'ಕಾರ್ಯಪಡೆ' ರಚಿಸುವ ಸಂಬಂಧ ಚಿಂತನೆ ನಡೆಸಲಾಗುತ್ತಿದೆ ಎಂದು ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕ ಶ್ರೀ ಜಿ.ಎಚ್. ವೀರಣ್ಣ ತಿಳಿಸಿದರು. ಇಲ್ಲಿಯ ಕೆ.ಆರ್. ಮಾರುಕಟ್ಟೆ ಸರ್ಕಾರಿ ಪೌಢಶಾಲೆಯಲ್ಲಿ ಮಂಗಳವಾರ ಆಯೋಜಿಸಿದ್ದ 'ತಾಲ್ಲೂಕುಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ' ಉದ್ಘಾಟಿಸಿ ಮಾತನಾಡಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನ ಜಿಲ್ಲಾ ಪ್ರಧಾನ ಆಯುಕ್ತ ಶ್ರೀ ಮುರುಘರಾಜೇಂದ್ರ ಚಿಗಟೇರಿ ಮಾತನಾಡಿದರು. ಉತ್ತರ ವಲಯ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಅಮಿತ್, ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಹನುಮಂತಪ್ಪ, ಶ್ರೀ ಶಿವನಾಯ್ಕ ಇದ್ದರು.

# ಬೆಂಗಳೂರು ದಕ್ಷಿಣ

ಆನೇಕಲ್ ತಾಲ್ಲೂಕಿನ ಮಾಯಸಂದ್ರ ಗ್ರಾಮದಲ್ಲಿ ಭಗತ್ ಸಿಂಗ್ ಓಪನ್ ರೋವರ್ ತಂಡ ಮತ್ತು ಗ್ರಾಮದ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಗಳ ಸಂಯುಕ್ತಾಶ್ರಯದಲ್ಲಿ ರಾಷ್ಟ್ರಪಿತ ಮಹಾತ್ಮ ಗಾಂಧಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀ ಅವರ ಜನ್ಮ ದಿನದ ಅಂಗವಾಗಿ ಸರ್ವಧರ್ಮ ಪ್ರಾರ್ಥನೆ ಮತ್ತು ಮದ್ಯಪಾನ ವಿರೋಧಿ ಜನ ಜಾಗೃತಿ ಜಾಥಾ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಇದೇ ಸಂದರ್ಭದಲ್ಲಿ ಇಲ್ಲಿನ ಸರ್ಕಾರಿ ಮಾದರಿ ಶಾಲೆಯ ಆವರಣದಲ್ಲಿ ಸರ್ವಧರ್ಮ ಪ್ರಾರ್ಥನೆ ನೆರವೇರಿಸಿ ಗ್ರಾಮದ ಪ್ರಮುಖ ಬೀದಿಗಳಲ್ಲಿ ಮದ್ಯಪಾನ ಸೇವನೆಯ ವಿರುದ್ಧ ಜನ ಜಾಗೃತಿ ಜಾಥಾ ನಡೆಸಲಾಯಿತು.

**ಭಗತ್ ಸಿಂಗ್ ಜನ್ಮ ದಿನಾಚರಣೆ**

ನಿಸ್ವಾರ್ಥತೆಯಿಂದ ದೇಶಕ್ಕಾಗಿ ಬದುಕಿ ಕೊನೆಗೂ ದೇಶದ ಸ್ವಾತಂತ್ರ್ಯಕ್ಕಾಗಿಯೇ ಮಡಿದ ಭಗತ್‌ಸಿಂಗ್ ಅವರದ್ದು ಒಂದು ಆದರ್ಶಮಯ ಜೀವನ ಎಂದು ಆನೇಕಲ್ ಆರಕ್ಷಕ ಉಪ ನಿರೀಕ್ಷಕ ಶ್ರೀ ಎಂ. ಎಲ್. ಚೇತನ್ ಕುಮಾರ್ ಅಭಿಪ್ರಾಯಪಟ್ಟಿದ್ದಾರೆ.

ಅವರು ಪಟ್ಟಣದಲ್ಲಿ ಭಗತ್‌ಸಿಂಗ್ ಜನ್ಮ ದಿನದ ಪ್ರಯುಕ್ತ ಭಾರತ್ ಸ್ಕೌಟ್ಸ್ ಗೈಡ್ಸ್‌ನ ಸಂಸ್ಥೆಯಾದ ಭಗತ್ ಸಿಂಗ್ ಓಪನ್ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ರೇಂಜರ್ ತಂಡಗಳು ಹಮ್ಮಿಕೊಂಡಿದ್ದ ಸಸಿ ನೆಡುವ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು. ಇದೇ ಸಂದರ್ಭದಲ್ಲಿ ಪಟ್ಟಣದ ಪೋಲೀಸ್ ಠಾಣಾ ಆವರಣ, ಕಂಬದ ಗಣಪತಿ ದೇವಾಲಯದ ಆವರಣ, ಸರ್ಕಾರಿ, ಮಾದರಿ ಹೆಣ್ಣುಮಕ್ಕಳ ಶಾಲೆ, ಹಳೆಯ ಮಾಧ್ಯಮಿಕ ಶಾಲೆ, ಡಿ.ಕೆ. ಬಾಗಿಲು ಶಾಲೆ, ದೇವಾಂಗ, ಪೇಟೆ ಶಾಲೆಗಲ ಆವರಣಗಳಲ್ಲಿ ಸಸಿಗಳನ್ನು ನೆಡಲಾಯಿತು. ಕಾರ್ಯಕ್ರಮಗಳನ್ನು ರೋವರ್ ತಂಡದ ನಾಯಕರಾದ ಶ್ರೀ ಎ.ಎನ್. ನರೇಂದ್ರಕುಮಾರ್ ಸಂಘಟಿಸಿದರು.

The Bangalore South District Organised the Basic Training Course for Teachers at Dr. Annie Besant Park from 3rd to 9th October 2009. DIET, Bangalore Urban District, Provided funds through S.S.A. Scheme for the Training Course. Govt/ Aided School Teachers underwent the Training Programme.

| | Name of the Course | Participants | Leaders of the Course |
|---|---|---|---|
| 1. | Basic Course for Scout Master | 40 | Sri M.Vi.Jaanardana |
| 2. | Advance Course for Scout Master | 14 | Sri T.K. Narayanaswamy |
| 3. | Basic Course for Guide Captain | 26 | Smt. Gayathri Gowda, |
| 4. | Advance Course for Guide Captain | 9 | Sister Cynthia, |
| 5. | Basic Course for Cub Master | 16 | Sri G Narayana swamy |
| 6. | Basic Course for Flock Leader | 15 | Smt. Nirmala Kalasetty |

Sri Kondajji B. Shanmukhappa, State Chief Commissioner visited the camp and addressed the participants, Sri Chinnaswamy Reddy, Headquarters Commissioner (Project) Sri N. Srinivasan, Joint State Secretary(S) Sri M.K. Khan Dist. Chief Commissioner and Sri P. Palani, District Commissioner (S) visited the camp. Sri H.M Hubballi, Co-ordinator, (Physical Education) Urban DIET visited and Sri M.S. Sateesh, District Secretary, Co-ordinated the camp activities along with other Staff Members and office bearers of District Association.

## ಧಾರವಾಡ

### ಗಾಂಧೀ ಜಯಂತಿ ಹಾಗು ಸರ್ವಧರ್ಮ ಪ್ರಾರ್ಥನೆ

ಗೋಕುಲ್ ರಸ್ತೆಯಲ್ಲಿರುವ ಓರಿಯಂಟಲ್ ಪಬ್ಲಿಕ್ ಸ್ಕೂಲಿನಲ್ಲಿ ಅಕ್ಟೋಬರ್ 2 ರಂದು ಸ್ಕೌಟ್ಸ್ – ಗೈಡ್ಸ್ ಮತ್ತು ಶಾಲಾ ಮಕ್ಕಳು ಮಹಾತ್ಮಾಗಾಂಧೀಜಿ ಮತ್ತು ಮಾಜಿ ಪ್ರಧಾನಿ ದಿ. ಲಾಲ್ ಬಹದ್ದೂರ್ ಶಾಸ್ತ್ರಿಯವರ ಭಾವಚಿತ್ರಕ್ಕೆ ಪೂಜೆ–ಶ್ರದ್ಧಾಂಜಲಿ ಅರ್ಪಿಸಿ ಗಾಂಧೀ ಜಯಂತಿಯನ್ನು ಆಚರಿಸಿದರು. ನಂತರ ಸಭಾ ಭವನದಲ್ಲಿ ಮಕ್ಕಳು, ಶಿಕ್ಷಕ–ಶಿಕ್ಷಕಿಯರು ಪ್ರಾಚಾರ್ಯರು ಮತ್ತು ಪ್ರಧಾನ ಗುರುಮಾತೆಯರು ಸರ್ವಧರ್ಮ ಸಮನ್ವಯ ಪ್ರಾರ್ಥನೆಯಲ್ಲಿ ಭಾಗವಹಿಸಿದರು. ಇದೇ ಸಂದರ್ಭದಲ್ಲಿ ದಿನಾಂಕ ಅಕ್ಟೋಬರ್ 2 ರಂದು ಜನಿಸಿದ ಪುಟ್ಟ ಬುಲ್ ಬುಲ್ ವಿದ್ಯಾರ್ಥಿನಿ ಫಿಜಾ ಬಳ್ಳಾರಿ ಇವಳ ಜನ್ಮ ದಿನವನ್ನು ಆಚರಿಸಿ ಎಲ್ಲ ಮಕ್ಕಳಿಗೆ ಸಿಹಿ ಹಂಚಲಾಯಿತು.

## ಬಾಗಲಕೋಟೆ

ದಿನಾಂಕ 02–10–2009 ರಂದು ರಾಷ್ಟ್ರಪಿತ ಶ್ರೀ ಮಹಾತ್ಮಾ ಗಾಂಧೀಜಿರವರ ಹಾಗೂ ದೇಶದ ಎರಡನೇ ಪ್ರಧಾನಿ ಶ್ರೀ ಲಾಲಬಹದ್ದೂರ ಶಾಸ್ತ್ರೀ ಅವರುಗಳ ಜನ್ಮ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆ ಬಾಗಲಕೋಟೆಯಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ ವಹಿಸಿದ್ದರು. ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಾವಳಗಿ ಭಾಗವಹಿಸಿದ್ದರು. ಸರ್ವಧರ್ಮ ಪ್ರಾರ್ಥನೆಯನ್ನು ಶ್ರೀಮತಿ ಪಿ.ಜಿ. ಬಂದಿಕೇರಿ, ಗೈಡ್ ಕ್ಯಾಪ್ಟನ್ ನಡೆಸಿಕೊಟ್ಟರು. ಸ್ವಾಗತವನ್ನು ಶ್ರೀ ಎಂ.ಎಂ. ಹಳ್ಳಾರ, ಡಿ.ಓ.ಸಿ. ನಡೆಸಿಕೊಟ್ಟರು. ಎಂ.ಪಿ.ಎಸ್. ನಂ. 4 ಶಾಲೆ, ಬಸವೇಶ್ವರ ಪ್ರಾಥಮಿಕ ಶಾಲೆ, ಸರಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು ಮತ್ತು ಬಸವೇಶ್ವರ ಪ್ರಾಥಮಿಕ ಶಾಲೆ, ವಿದ್ಯಾಗಿರಿ, ಬಾಗಲಕೋಟೆ ಸ್ಕೌಟ್ಸ್–ಗೈಡ್ಸ್ ಭಾಗವಹಿಸಿದ್ದರು. ಕೊನೆಯಲ್ಲಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಎ.ಎಸ್. ಶಿವಕುಮಾರ ವಂದನಾರ್ಪಣೆ ಮಾಡಿದರು.

## ಉತ್ತರ ಕನ್ನಡ

### ಗುಣವಂತೆಯಲ್ಲಿ ಸ್ಕೌಟ್ಸ್ – ಗೈಡ್ಸ್ ಮಕ್ಕಳಿಗೆ ತರಬೇತಿ ಶಿಬಿರ

ದಿನಾಂಕ : 2–10–2009 ರಿಂದ 3–10–2009 ರ ವರೆಗೆ ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಪ್ರೌಢಶಾಲೆ, ಗುಣವಂತೆಯಲ್ಲಿ ಸ್ಕೌಟ್ಸ್ ಗೈಡ್ಸಗಳಿಗೆ ತೃತೀಯ ಸೋಪಾನ ಹಗೂ ರಾಜ್ಯ ಪುರಸ್ಕಾರ ಪೂರ್ವ ತರಬೇತಿ ಶಿಬಿರವನ್ನು ಸ್ಕೌಟ್ ಮಾಸ್ಟರ್ ಆದ ಎಸ್.ಎಂ. ಗೌಡರವರು ಸಂಘಟಿಸಿದ್ದರು. ಕರಾವಳಿ ಪ್ರೌಢಶಾಲೆ ಹಾಗು ಮಾರ್ಥೋಮ ಶಾಲೆ ಒಟ್ಟು 64 ಮಕ್ಕಳು ಶಿಬಿರದ ಪ್ರಯೋಜನ ಪಡೆದುಕೊಂಡಿದ್ದಾರೆ. ಈ ಶಿಬಿರಕ್ಕೆ ಮುಖ್ಯ ಅತಿಥಿಗಳಾಗಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡೀಸ್ ಹಾಗೂ ಡಿ.ಓ.ಸಿ. ಶ್ರೀ ಎಸ್.ಎಂ. ಲೋಪಿಸ್ ರವರು ಉಪಸ್ಥಿತರಿದ್ದರು. ಅಧ್ಯಕ್ಷತೆಯನ್ನು ಕರಾವಳಿ ಪ್ರೌಢಶಾಲೆಯ ಮುಖ್ಯಾಧ್ಯಾಪಕರಾದ ಶ್ರೀ ಎಮ್.ಎಚ್. ನಾಯ್ಕರವರು ವಹಿಸಿದ್ದರು.

**ದೀಕ್ಷಾ ಸಮಾರಂಭ**

ಸಿರ್ಸಿಯ ಎಂ.ಇ.ಎಸ್. ಪ್ರೌಢಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಗೆ ದೀಕ್ಷಾ ಸಮಾರಂಭ ಏರ್ಪಡಿಸಿದ್ದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಭಟ್ಕಳ ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಕಾಂಚನಾ ನಾಯ್ಕ ಮತ್ತು ಶ್ರೀ ಬಿ.ಡಿ. ಫರ್ನಾಂಡೀಸ್ ಜಿಲ್ಲಾ ತರಬೇತಿ ಆಯುಕ್ತರು ಮಕ್ಕಳಗೆ ಸ್ಕೌಟಿಂಗ್ ಬಗ್ಗೆ ತಿಳಸಿದರು.

**ಗಾಂಧಿ ಜಯಂತಿ**

ದಿನಾಂಕ : 2-10-2009 ರಂದು ಮಾರ್ಥೋಮಾ ಶಾಲೆಯಲ್ಲಿ ಗಾಂಧಿ ಜಯಂತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಪ್ರಾಂಶುಪಾಲರಾದ ಫಾದರ್ ಥೋಮಸ್ ಮ್ಯಾಥ್ಯೂರವರು ಗಾಂಧೀಜಿಯವರ ಬಗ್ಗೆ ಮಾತನಾಡಿದರು. ಶ್ರೀ ಬಿ.ಡಿ. ಫರ್ನಾಂಡೀಸ್ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಶಾಲೆಯ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

# Mysore

## Scouters & Guiders Conference

Scouters and Guiders Conference was held on 8th September 2009 at Sri Jayachamarajendra Scouts and Guides, District Headquarters. 115 Scouters and Guiders particiapted in the Meet. Sri Narayan Setty, State Organising Commissioner addressed the participants. Sri jagadeesh, District Training Commissioner Welcomed the gathering Sri Abdul Jameel, District Secretary proposed Vote of thanks.

The following subjects were discussed and Demonstrated at the conference. Pack, Flock Troop, Company Meetings, B.P. Six, Flag Procedures, investiture ceremony, and Map Reading. The Valedictory function was held at 4.30 p.m. Dr. P.V. Rathne Urs, Asst. State Commissioner (G) Mysore Division presided.

# Bangalore North

The Bangalore North District Organised the Basic Training Course for Teachers from 1st October to 7th October 2009 at the campus of Himamshu Jyothikala Peeta, Malleswaram Bangalore.

| | Name of the Course | Participants | Leaders of the course |
|---|---|---|---|
| 1. | Basic Coursefor Guide Captain | 20 | Smt. Geetha Nataraj |
| 2. | Basic Course for Flock Leader | 18 | Smt. B. Revati |
| 3. | Bunny Leader Course | 8 | Smt. N.K. Chaya |

Sri Kondajji B. Shanmukhappa, S.C.C. visited the camp on 6-10-2009 and addressed the participants Sri A .Devaprakash, Dist. Chief Commissioner and Joint Director of Public Instruction (DSERT) Sri Prem Kumar, Dist. Commissioner(S) Smt. Vanitha Narayan, DC(G) Sri B.K. Sheshadri Dist. Secretary were present. Sri Somasundaram, Principal, Himamshu Jyothi Kala Peeta extended all necessary help in organising the Training course at their Campus

### *Udupi District to Host*

## *The 33rd State Level Cub & Bul Bul Utsav*

The 33rd State Level Cub & Bul Bul Utsav will be held at Silas International School Campus from 27th to 31st December 2009 at Udupi. The District Association of Bharat Scouts & Guides, Udupi District will Host the State Level Event.

# ಭಯೋತ್ಪಾದನೆ

- ಗೊ.ರು. ಚನ್ನಬಸಪ್ಪ

ಇದು ಸುದ್ದಿ ಮಾಧ್ಯಮಗಳ ಕಾಲ, ಮದ್ದುಗುಂಡುಗಳ ಜಾಲ, ಪತ್ರಿಕೆ ತೆರೆದರೆ, ಟಿ.ವಿ. ನೋಡಿದರೆ, ರೇಡಿಯೋ ಕೇಳಿದರೆ, ಅದೇ ಸುದ್ದಿ, ಅದೇ ದೃಶ್ಯ, ಅದೇ ಸಂಗತಿ. ವಿಮಾನಗಳ ಹಾರಾಟ, ಬಾಂಬುಗಳ ಚೀರಾಟ, ಹೊಗೆ ಬೆಂಕಿಯ ನೋಟ,  ಸಾವುನೋವುಗಳ ಚೀರಾಟ. ಜಗತ್ತೇ ತಲ್ಲಣಗೊಂಡಿದೆ. ಈ ಪ್ರಕ್ಷುಬ್ಧ ಪರಿಸ್ಥಿತಿಗೆ ಮೂಲಕಾರಣ ಭಯೋತ್ಪಾದನೆ; ಉಗ್ರಗಾಮಿಗಳ ಉದ್ಧತತನ.

ಭಯೋತ್ಪಾದನೆ ಇದ್ದಕ್ಕಿದ್ದಂತೆ ಎದ್ದು ಬಂದ ಭೂತವಲ್ಲ. ಕೆಲವು ರಾಷ್ಟ್ರಗಳು ಹುಟ್ಟು ಹಾಕಿ ಬಿಟ್ಟು ಬೆಳೆಸಿದ ಭಯಾನಕ ವಿಷವೃಕ್ಷ; ಕಿರಾತಶಕ್ತಿ. ಹಿಡಿಕ್ರೂರಿಗಳು ಬಿತ್ತಿ ಬೆಳೆದ ಈ ವಿಷವೃಕ್ಷದ ಫಲವನ್ನು ಈಗ ಇಡೀ ವಿಶ್ವವೇ ಉಣ್ಣಬೇಕಾಗಿದೆ. ಈ ದುಷ್ಟಶಕ್ತಿ ಈಗ ವಿಶ್ವದ ಎಲ್ಲ ರಾಷ್ಟ್ರಗಳಲ್ಲಿಯೂ ಹಬ್ಬಿಕೊಂಡಿದೆ.

ಭಯೋತ್ಪಾದನೆಯ ಬಗೆಗೆ ಜಾಗತಿಕ ಜಾಗೃತಿ ಅಗತ್ಯವೆಂದು ಭಾರತ ಹೇಳುತ್ತಲೆ ಬಂದರೂ ಮೊದಮೊದಲು ಯಾರೂ ಅದನ್ನು ಗಂಭೀರವಾಗಿ ಪರಿಗಣಿಸಿರಲಿಲ್ಲ. ಆದರೆ ವಿಶ್ವದ ಶ್ರೀಮಂತ ರಾಷ್ಟ್ರವೊಂದಕ್ಕೆ ಆ ಭೂತ ಬಂದು ಅಪ್ಪಳಿಸಿದ ಮೇಲೆ ಈಗ ಎಲ್ಲೆಲ್ಲೂ ಅದೇ ಮಾತು.

ಇಂದು ಉಂಟಾಗಿರುವ ಜಾಗತಿಕ ತಲ್ಲಣಕ್ಕೆ ಮೂಲ ಕಾರಣವಾದ ಭಯೋತ್ಪಾದನೆ ಚಿಗುರೊಡೆದು ಒಗರಾಗಲು ಉಗಮಸ್ಥಾನವೆಂದರೆ ಜನರ ಮೂಲಭೂತ ಅಗತ್ಯಗಳ ಪೂರೈಕೆಯಲ್ಲಿ ಆಡಳಿತವು ನಡೆಸುವ ಪಕ್ಷಪಾತ. ಅವರ ಬೇಡಿಕೆಗಳ ಬಗೆಗೆ ಅಧಿಕಾರಸ್ಥರು ತಾಳುವ ಅಲಕ್ಷ್ಯ. ಅಂತಹ ಸಂದರ್ಭದಲ್ಲಿ ಅವಜ್ಞೆಗೆ ಒಳಗಾದ ವ್ಯಕ್ತಿ ಅಥವಾ ಗುಂಪಿನಲ್ಲಿ ಸಹಜವಾಗಿ ಅಸಂತುಷ್ಟಿಯ ಹೊಗೆಯಾಡುತ್ತದೆ. ಆ ಮನಃಕ್ಷೋಬೆಯ ಒತ್ತಡ ಕುದಿಯಾಗುತ್ತದೆ; ನಂತರ ಭುಗಿಲೇಳುತ್ತದೆ.

ಆಡಳಿತದ ದಂಡದಡಿ ಅಸಂತುಷ್ಟ ವರ್ಗಕ್ಕೆ ಅಭದ್ರತೆಯ ಅನುಭವವಾಗುತ್ತದೆ. ಹತಾಶೆ ಅನಿವಾರ್ಯವಾಗುತ್ತದೆ. ಆ ವರ್ಗ ಉದ್ವೇಗಕ್ಕೆ ಒಳಗಾಗುತ್ತದೆ. ನಿಗ್ರಹ ಶಕ್ತಿಯ ವಿರುದ್ಧ ಉಗ್ರವಾಗುತ್ತಲೇ ಹೋಗುತ್ತದೆ. ಆ ವರ್ಗದ ಜನರಲ್ಲಿ ತಮಗೆ ಅನ್ಯಾಯವಾಗುತ್ತಿದೆ, ತಾವು ಅನಿಶ್ಚಿತ ಸ್ಥಿತಿಯಲ್ಲಿದ್ದೇವೆ, ತಮ್ಮನ್ನು ತುಳಿಯಲಾಗುತ್ತಿದೆ ಎಂಬ ಅರಿವು ಹೆಚ್ಚಿದಂತೆಲ್ಲ ಅವರು ಎಲ್ಲೆಂದರಲ್ಲಿ ಅಡಗುತ್ತಾರೆ. ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಆ ಹಂತದಲ್ಲಿ ಆಡಳಿತದ ದಮನ ಕಾರ್ಯ ಅಧಿಕಗೊಂಡಂತೆಲ್ಲ ಅವರ ಹಿಂಸಾತ್ಮಕ ಚಟುವಟಿಕೆಗಳೂ ಮತ್ತಷ್ಟು ವಿಕೃತಗೊಳ್ಳುತ್ತವೆ.

ವಾಸ್ತವವಾಗಿ, ಈ ಉಗ್ರಗಾಮಿ ಶಕ್ತಿಗಳು ಹುಟ್ಟಿಕೊಂಡುದೇ ಸರ್ವಾಧಿಕಾರ ಪ್ರಭುತ್ವದ ಸರ್ಪದ ಹೆಡೆಯ ನೆರಳಿನಲ್ಲೇ. ಕೆಲವು ಕಡೆ ದುರ್ಬಲ ಸರ್ಕಾರಗಳೂ ಕಾರಣವಾಗಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕಳೆದುಕೊಂಡು ಸರ್ವಾಧಿಕಾರ ಪ್ರಭುತ್ವ ಬಂದ ದೇಶಗಳಲ್ಲಿ ಅಲ್ಲಿನ ನಿಷ್ಕರುಣ ಹಾಗೂ ಭ್ರಷ್ಟ ಆಡಳಿತದಿಂದ ಹತಾಶರಾದ ಜನ ತಮ್ಮ ರಕ್ಷಣೆಗಾಗಿ ಧರ್ಮಕ್ಕೆ ತೆಕ್ಕೆ ಬೀಳುವುದುಂಟು, ಸರ್ವಾಧಿಕಾರಿ ಆಡಳಿತಗಳು ರಾಜಕೀಯ ಪ್ರತಿರೋಧಗಳನ್ನು ನಾಮಾವಶೇಷ ಮಾಡಹೊರಟಾಗ ಹತಾಶ ಶಕ್ತಿಗಳು ಧರ್ಮದ ಅಸ್ತ್ರವನ್ನು ಕೈಗೆ ಹಿಡಿದುಕೊಂಡುದುಂಟು. ರಾಜಕೀಯ ಉದ್ದೇಶಕ್ಕಾಗಿ ಧರ್ಮವನ್ನು ಬಳಸಿಕೊಳ್ಳುವುದೆಂದರೆ ಅದು ಅತ್ಯಂತ ಅಪಾಯಕಾರಿ ಬೆಳವಣಿಗೆ.

ಒಂದು ಕಡೆ ಆಡಳಿತದ ಪಕ್ಷಪಾತ ಮತ್ತು ಭ್ರಷ್ಟಾಚಾರಗಳು, ಮತ್ತೊಂದೆಡೆ ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ಬಡತನ, ಸ್ವಾರ್ಥ ಹಿತಾಸಕ್ತಿಗಳು, ಪ್ರತ್ಯೇಕತಾ ವಾದಿಗಳು, ಜಾತಿವಾದಿಗಳು ಜನರನ್ನು ಪ್ರಚೋದಿಸಿ ಅಶಾಂತಿ ಉಂಟುಮಾಡಲು ಪ್ರಯತ್ನಿಸುವುದು – ಇಂತಹ ಸನ್ನಿವೇಶದಲ್ಲೇ ಉಗ್ರಗಾಮಿಗಳು ಹತಾಶ ಸಮುದಾಯದಲ್ಲಿ ಧರ್ಮಾಂಧತೆ ಮತ್ತು ಪ್ರತ್ಯೇಕತೆಯ ವಿಷಬೀಜ ಬಿತ್ತಿ ಬಿಡುತ್ತಾರೆ. ಹಾಗಾಗಿ ಧರ್ಮವನ್ನು ಹಿಂಸಾತ್ಮಕಗೊಳಿಸಿ ಬಿಡುತ್ತಾರೆ; ಅಪ್ರಜಾಸತ್ತಾತ್ಮಕ ಗೊಳಿಸುತ್ತಾರೆ. ಈ ಮತಿಭ್ರಮಣೆ ಈಗ ಲೋಕಜೀವನದ ಮುಖ್ಯವಾಹಿನಿಯನ್ನೆ ಪ್ರವೇಶಿಸಿಬಿಟ್ಟಂತಿದೆ.

ದಾರ್ಶನಿಕ ಕನ್‌ಫ್ಯೂಷಿಯಸ್ ಒಂದು ಮಾತು ಹೇಳಿದ್ದಾನೆ: 'ದೂರ ದೃಷ್ಟಿಯ ಚಿಂತನೆ ಮಾಡದವನು ಹತ್ತಿರದಲ್ಲೇ ಕಷ್ಟ ಅನುಭವಿಸಬೇಕಾಗುತ್ತದೆ' ಎಂದು. ಆದರೆ ಈಗಾಗಲೇ ಕಷ್ಟ ಬಂದು ನಮ್ಮ ಕೈಹಿಡಿದಿದ್ದಾಗಿದೆ. ಈಗಲಾದರೂ ದೂರದೃಷ್ಟಿಯಿಂದ ವಿಚಾರ ಮಾಡಿ ಜಾತಿ–ಜನಾಂಗ, ಪ್ರದೇಶ ಮೊದಲಾದ ಎಲ್ಲ ಭೇದಗಳನ್ನು ಬದಿಗೊತ್ತಿ, ಪ್ರತಿಯೊಂದು ರಾಷ್ಟ್ರವೂ ತನ್ನ ಸಮಗ್ರತೆಯನ್ನು ಉಳಿಸಿಕೊಳ್ಳಲು ಈ ಭಯೋತ್ಪಾದಕ ಶಕ್ತಿಗಳನ್ನು ಅಡಗಿಸಲು ಶ್ರಮಿಸಬೇಕಾಗಿದೆ. ಇಲ್ಲವಾದರೆ ಮಾನವೀಯ ಮೌಲ್ಯಗಳೆಲ್ಲ ಮಣ್ಣು ಪಾಲಾಗಿ ಪಾಶವೀಯ ಶಕ್ತಿಗಳ ಕಾಲ್ತುಳಿತಕ್ಕೆ ಬಲಿಯಾಗಬೇಕಾಗುತ್ತದೆ.

............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 2

# ಕಾರ್ಯಸರಣಿ

## ಶಿಬಿರಾಗ್ನಿ ಉದಂತ ಸಂ – 5

ಸ್ಕೌಟು ನಗರ ಪ್ರದೇಶಗಳಲ್ಲಿಯೂ ಇತರ ಸಾಮಾನ್ಯ ಬಾಲಕರಿಗಿಂತಲೂ ಮೇಲಾಗಿ ಹೆಚ್ಚು ಕೆಲಸಗಳನ್ನು ಮಾಡಿಕೊಳ್ಳಬಲ್ಲನು. ಸ್ಕೌಟು ಶಿಬಿರದಲ್ಲಿ ಮಾಡುವಂತೆ ಹತ್ತಾರು ವಿಷಯಗಳ ಬಗ್ಗೆ ಯೋಚಿಸಲು. ಕೆಲಸ ಮಾಡಲು, ಕಲಿತಿರುವುದರಿಂದ ನಾಗರೀಕತೆಯ ಮಧ್ಯೆ ಬಂದಿಳಿದಾಗ ಸುಲಭವಾಗಿ ಉದ್ಯೋಗವನ್ನು ದೊರಕಿಸಿಕೊಳ್ಳಬಲ್ಲನು; ಏಕೆಂದರೆ ಅವನು ಯಾವುದೇ ಉದ್ಯೋಗವನ್ನು ಮಾಡಲೂ ತಯಾರಾಗಿರುತ್ತಾನೆ.



**ಶಿಕ್ಷಿತ, ಕಗ್ಗಾಡು ಪ್ರದೇಶ ನಿವಾಸಿಗರಿಗೆ, ಕಾಡಿನ ರೀತಿ, ನೀತಿಗಳು ತಿಳಿದಿರುತ್ತವೆ. ಅವರು ಸಾವಿರಾರು ರೀತಿಗಳಲ್ಲಿ ತಮ್ಮನ್ನು ತಾವು ಸೌಖ್ಯವಾಗಿರುವಂತೆ ನೋಡಿಕೊಳ್ಳಬಲ್ಲರು.**

### ಪರಿಶೋಧನೆ

ಸ್ಕೌಟುಗಳು ಪೆಟ್ರೋಲುಗಳ ಪ್ರಕಾರ ಪರಿಶೋಧನಾಯಾನವನ್ನು ಕೈಗೊಳ್ಳಬಹುದು ಅಥವಾ ಇಬ್ಬಿಬ್ಬರಂತೆ ಹಿಂದಿನ ಕಾಲದ ಸಂಚಾರಿ ಸಾಹಸವೀರರಂತೆ (Knight errants) ಯಾತ್ರೆ ಹೊರಟು, ಅವಶ್ಯಕತೆಯಿರುವ ಜನರನ್ನು ಪತ್ತೆಮಾಡಿ, ಅವರಿಗೆ ಸಹಾಯ ಮಾಡಬಹುದು. ಇದನ್ನು ಕಾಲುನಡಿಗೆಯಲ್ಲಾಗಲೀ, ಸೈಕಲ್ ಮೇಲಾಗಲೀ ಮಾಡಬಹುದು. ಈ ರೀತಿ ಯಾತ್ರೆ ಹೊರಟ ಸ್ಕೌಟುಗಳು ಸಾಧ್ಯವಾದರೆ (ಯಾವುದೇ ಕಾರಣದಿಂದಲಾಗಲೀ) ಕಟ್ಟಡಗಳ ಒಳಗೆ ನಿದ್ರಿಸಬಾರದು. ನಿರ್ಮಲ ಹವೆಯ ರಾತ್ರಿಗಳಲ್ಲಿ, ಎಲ್ಲೆಂದರಲ್ಲಿ, ಹೊರಾಂಗಣದಲ್ಲಿ ಮಲಗಬೇಕು. ಹವೆಯು ಕೆಟ್ಟಿರುವಾಗ ಎಂದರೆ ಚಳಿ, ಗಾಳಿ, ಮಳೆಯಿರುವಾಗ ಅವರು ಹುಲ್ಲು ಮೆದೆ ಅಥವಾ ಧಾನ್ಯ ಉಗ್ರಾಣಗಳನ್ನು ಉಪಯೋಗಿಸಲು ಅಪ್ಪಣೆ ಪಡೆಯುತ್ತಾರೆ.

ಎಲ್ಲಾ ವೇಳೆಗಳಲ್ಲಿಯೂ ಜೊತೆಯಲ್ಲಿ ನಕ್ಷೆಯನ್ನು ತೆಗೆದುಕೊಂಡು ಹೋಗಬೇಕು. ಬೇರೆಯವರನ್ನು ಮಾರ್ಗದರ್ಶನಕ್ಕಾಗಿ ಕೇಳಬಾರದು.

### ನಕ್ಷೆಯನ್ನು ಓದುವುದು

ಭೂ ಮೇಲ್ಮೈ ನಕ್ಷೆಗಳಾಗಲಿ (Top maps) ಅಥವಾ 1" ಸರ್ವೆನಕ್ಷೆ (ಶಾಸನಬದ್ಧ ಸರ್ವೆನಕ್ಷೆ) ಗಳಾಗಲೀ, ಪರಿಶೋಧನಾಯಾನಕ್ಕೆ, ಒಳ್ಳೆಯ ನಕ್ಷೆಗಳೆನಿಸುತ್ತವೆ. 1" ನಕ್ಷೆಯೆಂದರೆ, ಭೂಪಟದ ಮೇಲಿನ 1" ಪ್ರದೇಶವು ಭೂಮಿಯ ಮೇಲಿನ 1 ಮೈಲಿ ಪ್ರದೇಶವನ್ನು ಸೂಚಿಸುತ್ತದೆ.

ಈ ನಕ್ಷೆಗಳಲ್ಲಿ ಕಾಡುಗಳು, ನದಿಗಳು, ಸರೋವರಗಳು, ರಸ್ತೆಗಳು, ಕಟ್ಟಡಗಳು ಇತ್ಯಾದಿ ಎಲ್ಲವನ್ನೂ ಸೂಕ್ತವಾದ ಸಾಂಪ್ರದಾಯಿಕ ಚಿಹ್ನೆಗಳಿಂದ ಗುರುತಿಸಲಾಗಿರುತ್ತದೆ. ಗಿರಿ, ಪರ್ವತಗಳನ್ನು ಮಟ್ಟರೇಖೆಗಳಿಂದ (Contour lines) ಗುರುತಿಸಲಾಗಿರುತ್ತದೆ. ಮಟ್ಟರೇಖೆ ಎಂದರೆ, ಒಂದೇ ಮಟ್ಟದ ಎಲ್ಲಾ ಪ್ರದೇಶ ಬಿಂದುಗಳನ್ನೂ ಸೇರಿಸುವ ರೇಖೆ. ಉದಾ: 200' ಮಟ್ಟ ರೇಖೆಯು, ಸಮುದ್ರ ಮಟ್ಟದಿಂದ 200' ಎತ್ತರದಲ್ಲಿರುವ ಎಲ್ಲಾ ಪ್ರದೇಶ ಬಿಂದುಗಳನ್ನೂ ಕೂಡಿಸುತ್ತದೆ.




*ಇವು ನೀವು ನಕ್ಷೆಯಲ್ಲಿ ಕಾಣುವ ಕೆಲವು ಸಾಂಪ್ರದಾಯಿಕ ಚಿಹ್ನೆಗಳು*
*ಪ್ರಮುಖ ಚಿಹ್ನೆಗಳನ್ನು ಮಾತ್ರ ತೋರಿಸಲಾಗಿದೆ.*

ಕೆಲವೊಮ್ಮೆ ಬೆಟ್ಟ, ಪರ್ವತಗಳನ್ನು "ಗಿರಿ ರೇಖೆ" (Hashers) ಗಳಿಂದಲೂ ಗುರುತಿಸಲಾಗುತ್ತದೆ. ಗಿರಿರೇಖೆಗಳೆಂದರೆ ಬೆಟ್ಟ/ಪರ್ವತ ಶಿಖರದಿಂದ, ಸೂರ್ಯ ಕಿರಣದಂತೆ, ಎಲ್ಲಾ ದಿಕ್ಕುಗಳಿಗೂ ಹರಡಿದಂತಿರುವ ಸೂಕ್ಷ್ಮ ರೇಖೆಗಳು.

ನಕ್ಷೆಯನ್ನು ಉಪಯೋಗಿಸಲು ಮೊದಲು ಅದನ್ನು ಅಣಿಮಾಡಿಕೊಳ್ಳಬೇಕು. ಎಂದರೆ ಉತ್ತರ ದಿಕ್ಕಿಗೆ ಸರಿಯಾಗಿ ಬರುವಂತೆ ಸ್ವಾಭಾವಿಕ ದಿಕ್ಕುಗಳೂ, ನಕ್ಷೆಯ ಮೇಲಿನ ದಿಕ್ಕುಗಳೂ, ಒಂದೇ ಆಗುವಂತೆ ನಕ್ಷೆಯನ್ನು ಹರಡಿಕೊಳ್ಳಬೇಕು. ಇದಕ್ಕೆ ಸುಲಭವಾದ ಕ್ರಮವೆಂದರೆ ಭೂಪಟದಲ್ಲಿನ ರಸ್ತೆಯೂ, ಭೂಮಿಯ ಮೇಲಿನ ರಸ್ತೆಯೂ ಸಮಾನ ದಿಕ್ಕಿನಲ್ಲಿರುವಂತೆ ನಕ್ಷೆಯನ್ನು ತಿರುಗಿಸಬೇಕು. ದಿಕ್ಸೂಚಿಯನ್ನುಪಯೋಗಿಸಿ ದಿಕ್ಸೂಚಿಯ ಮತ್ತು ನಕ್ಷೆಯ ಉತ್ತರ ದಿಕ್ಕುಗಳು ಒಂದೇ ಇರುವಂತೆ ಸರಿಪಡಿಸಿಕೊಳ್ಳಬೇಕು.

ನಿಮ್ಮ ನಕ್ಷೆಯಲ್ಲಿ ಅಯಸ್ಕಾಂತಿಕ ಉತ್ತರ ದಿಕ್ಕನ್ನು ಗುರುತಿಸಿದ್ದರೆ, ಅದೂ ದಿಕ್ಸೂಚಿಯ "ಉತ್ತರ"ವೂ, ಒಂದೇ ಆಗುವಂತೆ ನಕ್ಷೆಯನ್ನು ತಿರುಗಿಸಿ, ಸರಿಪಡಿಸಿಕೊಳ್ಳಿ.

ನೀವು ಪ್ರಯಾಣ ಮಾಡುವಾಗ ರಸ್ತೆಯಲ್ಲಿನ ವಿವರಗಳನ್ನು ಗಮನಿಸಬೇಕು. ನಿಮ್ಮ ಪ್ರಯಾಣದ ಬಗ್ಗೆ ಸಾಧ್ಯವಾದಷ್ಟೂ ವಿಷಯಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಇದರಿಂದ ಅವಶ್ಯಕತೆ ಬಿದ್ದಾಗ ಇತರರಿಗೆ ಮಾರ್ಗದರ್ಶನ ನೀಡಲು ಸಹಾಯವಾಗುತ್ತದೆ.

ನಕ್ಷೆಯನ್ನು ಚಿತ್ರಿಸುವುದು

ಒಂದು ನಕ್ಷೆಯನ್ನು ಚಿತ್ರಿಸಿ, ಅದೇನೂ ವಿಸ್ತಾರವಾದ ವಿವರಣೆಗಳಿಂದ ಕೂಡಿರಬೇಕಾಗಿಲ್ಲ. ಅದನ್ನು ಯಾರಾದರೂ ಓದಿನೋಡಿ ದಾರಿಕಂಡುಕೊಂಡರೆ ಸಾಕು. ಅದರಲ್ಲಿ ಉತ್ತರ ರೇಖೆಯನ್ನೂ, ಕಚ್ಚಾಪ್ರಮಾಣವನ್ನೂ ನಮೂದಿಸಲು ಮರೆಯಬೇಡಿ.

ಪರಿಶೋಧಕರು ತಮ್ಮ ದಿನಚರಿಯನ್ನು ಪುಸ್ತಕದಲ್ಲಿ (ಐಔಉ) ಬರೆದಿಟ್ಟುಕೊಳ್ಳುತ್ತಾರೆ. ಅದರಲ್ಲಿ ಆಯಾದಿನದ ಪ್ರಯಾಣದ ಸಂಕ್ಷಿಪ್ತ ವರದಿಯನ್ನು ತಾವು ಗಮನಿಸಿದ ಕುತೂಹಲಕಾರಕ ವಿಷಯಗಳ ಫೋಟೋಗಳು ಮತ್ತು ಸರಳ ಚಿತ್ರಣದ ಮೂಲಕವಾಗಿ ನಿರೂಪಿಸುತ್ತಾರೆ.

ಮುಂದುವರೆಯುವುದು..............

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide News Magazine

## Thought for the Month

Do all the good you can
By all the means you can
In all the ways you can
In all the places you can
At all the times you can
To all the People you can
As long as ever you can.

♣ ♣ ♣ ♣

Courage, brother, do not stumble
Though thy path be dark as night
There's a start to guide the humble
Trust in God, and do the right.

♥ ♥ ♥ ♥

We live in deeds, not in years; in thoughts not breaths;
In feelings, not in figures on a diel.
We should count time by heart-throbs. He most lives
Who thinks most- feels the noblest-act the best.

♦ ♦ ♦ ♦

Little deeds of kindness, little words of love
Help to make earth happy, like the heaven above.

♠ ♠ ♠ ♠

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು




ಇಚಿಧನ ಇಲಾಖೆಯ ಮಾನ್ಯ ಮಂತ್ರಿಗಳಾದ ಶ್ರೀ ಕೆ.ಎಸ್. ಈಶ್ವರಪ್ಪನವರು ದಿನಾಂಕ 19–9–09ರಂದು ಶಿವಮೊಗ್ಗದಲ್ಲಿ ಜಿಲ್ಲಾ ಮೆಳವನ್ನು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ನಾರಾಯಣ ಶಾಸ್ತ್ರಿಯವರು ಹಾಗೂ ಜಿಲ್ಲೆಯ ಇತರ ಪದಾಧಿಕಾರಿಗಳನ್ನು ಕಾಣಬಹುದು.



2–10–09ರಂದು ಅನೇಕಲ್ ಭಗತ್ ಸಿಂಗ್ ಓಪನ್ ರೋವರ್ ತಂಡ ಹಾಗೂ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಮಾಯಸಂದ್ರ, ಇವರ ಆಶ್ರಯದಲ್ಲಿ ಮಹತ್ಮಾ ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರೀಜಿ ಜನ್ಮ ದಿನಾಚರಣೆ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಹಾಗೂ ಮಧ್ಯಪಾನ ವಿರೋಧಿ ಜಾಗೃತಿ ಜಾಥಾ ನೆಡೆಸಿದರು.



ಕೊಪ್ಪಳದಲ್ಲಿ ಡಾ॥ ಎ.ಪಿ.ಜೆ ಅಬ್ದುಲ್ ಕಲಾಂ ಸ್ಕೌಟ್ ತಂಡ ಮತ್ತು ರಾಣಿ ಕಿತ್ತೂರು ಚನ್ನಮ್ಮ ಗೈಡ್ ಕಂಪನಿಯನ್ನು ಉದ್ಘಾಟಿಸುತ್ತಿರುವುದು.



ದಕ್ಷಿಣ ಕನ್ನಡ ಜಿಲ್ಲೆ ರೋವರ್ಸ್ ಮತ್ತು ರೇಂಜರ್‌ರವರು ಮಲೇರಿಯಾ ನಿರ್ಮೂಲನಕ್ಕೆ ಸಂಭಂಧಿಸಿದ ಕರಪತ್ರಗಳನ್ನು ಸಾವಜನಿಕರಿಗೆ ವಿತರಿಸುತ್ತಿರುವುದು.



ನರಗುಂದದ ತಹಸೀಲ್ದಾರ್ ಹಾಗೂ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀಮತಿ ರೇಣುಕಾಂಬರವರು ಸಸಿ ನೆಡುತ್ತಿರುವುದು. ಚಿತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಯವರಾದ ಶ್ರೀಮತಿ ಮಂಗಳ ಪಾಟೀಲ್ ಮತ್ತಿತರರನ್ನು ಕಾಣಬಹುದು.



ಕೊಂಡಜ್ಜಿಯಲ್ಲಿ ದಿನಾಂಕ 12ರಿಂದ 16 ಅಕ್ಟೋಬರ್ 2009ರವರೆಗೆ ನಡೆದ ರಾಷ್ಟ್ರಪತಿ ಗೈಡ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ್ದ ಗೈಡ್ಸ್‌ಗಳ ವಿಹಂಗಮನೋಟ.

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 30-10-2009






## APPEAL

The recent heavy rains in North and Coastal Karnataka have caused unprecedented damage to Life, Livestock, Standing Crops, Houses, School Buildings & Infrastructure. Over 200 deaths have been recorded. So far 2.5 Lakh houses have collapsed or damaged. About 2 crore people in 1500 villages have been severely affected by the floods.

We appeal to the Public, Philanthropists, Industries, Educational Institutions, Teachers, Scout Masters, Guide Captains, Scouts, Guides, Rovers & Rangers Voluntary Organizations to come forward and Contribute generously to this massive relief and rehabilitation to the Flood affected Victims.

The Contribution can be made through Cheques or D.D drawn in favour of **"The Bharat Scouts & Guides, Karnataka-Flood Relief Account".**

The Contributions are eligible for Exemption Under Section 80G of the Income Tax Act.

The names of the Donors will be Published in the Karnataka Scout & Guide News Magazine














8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase, West of Chord Road,
Mahalakshmipuram, Bangalore-560086.

**If not delivered, please return to :**
**THE EDITOR**, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine